ವಿವೇಚನ ಗ್ರಂಥಮಾಲಾ ೪.

# “ಅದನ್ನೇ ಉಂಡೇನು! ಕದತೆಗ!!”

ವಿವೇಚನಾವಧಾನಿ.

(ನ. ಜ. ಗ್ರಾ)



ವಿವೇಚನ ಗ್ರಂಥಮಾಲಾ ಆಫೀಸ್,

ಹೊಳೇನರಸೀಪುರ.



ಕ್ರ ೧—೪—೦

# ಬಲ್ಲವರು ಅನ್ನುವುದೇನು ?

(1) 'ನವೀನ ಸ್ತ್ರೀಸ್ವಾತಂತ್ರ್ಯ ಅಥವಾ ಸ್ತ್ರೀ ಪುರುಷರಿಬ್ಬರೂ ಸಮರು.'

(2) 'ನನ್ನ ಅನುಭವ ಅಥವಾ ಸುಖದುಃಖಗಳ ವಿಮರ್ಶೆ'

ಶ್ರೀಯುತ ಬಿನಿಗಲ್ ರಾಮರಾವ್ M. A. ಮದ್ರಾಸ್ ಗೌ॥ ಟ್ರಾನ್ಸ್‌ಲೇಟರವರು.

'ಕಥೆಗಳು ಮನೋಹರಗಳಾಗಿವೆ, ಶೈಲಿಯು ಲಲಿತವಾಗಿಯೂ ಪುಷ್ಟವಾಗಿಯೂ ಇದೆ.'

ಶ್ರೀಯುತ ಹೊಸಕೆರೆ ಚಿದಂಬರಯ್ಯನವರು:—

'ಈ ಪುಸ್ತಕಗಳು ಮನೋಹರಗಳಾಗಿವೆ. ಎಲ್ಲರೂ ಒಮ್ಮೆ ಓದಬೇಕು.'

ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಬೆಂಗಳೂರು:- 'ನನ್ನ ಅನುಭವವು ಬಹಳ ಸುಲಭಶೈಲಿಯ ಕಥೆಯಾಗಿರುವುದರಿಂದ ಬಾಲಕರು ಓದಲು ತಕ್ಕುದಾಗಿರುವುದು.'

ಕಂಠೀರವ ಪತ್ರಿಕೆ ಮಂಗಳೂರು:—

'ನವೀನ ಸ್ತ್ರೀಸ್ವಾತಂತ್ರ್ಯವು ಸಂಭಾಷಣೆಯ ರೂಪದಲ್ಲಿಯೂ,' 'ನನ್ನ ಅನುಭವವು ಕಾದಂಬರಿಯ ರೂಪದಲ್ಲಿಯೂ ಬರೆಯಲ್ಪಟ್ಟು, ಶೈಲಿ, ಸಂವಿಧಾನ, ವಿಷಯಗಳೇ ಮುಂತಾದುವು ರಸಭರಿತವಾಗಿವೆ. ಒಂದರಲ್ಲಿ ಈಗಿನ ವಿದ್ಯಾಭ್ಯಾಸ, ಉಚ್ಚವಾದ ಉದ್ಯೋಗಗಳ ಸುಖ ಕಷ್ಟಗಳನ್ನೂ, ಇನ್ನೊಂದರಲ್ಲಿ, ಸ್ತ್ರೀ ಪುರುಷರ ಸಮತ್ವದ ತತ್ವವೂ ಸರಳವಾಗಿ ಅಚ್ಚಗನ್ನಡದಲ್ಲಿ ನೈಸರ್ಗಿಕವಾಗಿ ವರ್ಣಿತವಾಗಿವೆ. ಇವೆರಡನ್ನೂ ಓದುವುದರಿಂದ, ಈಗಿನ ನಿಜವಾದ ಪರಿಸ್ಥಿತಿಯು ಗೋಚರವಾಗುವುದು. ಕನ್ನಡಿಗರು ತ್ವರೆಮಾಡಲಿ.'

ಶ್ರೀಯುತ ಬಿ. ಕೃಷ್ಣಪ್ಪ M. A. ಲೇಟ್ ಕನ್ನಡ ಪ್ರೊಫೆಸರ್ ಮಹಾರಾಜಾಕಾಲೇಜ್, 'ನನ್ನ ಅನುಭವವು ಹೆಚ್ಚು ಆದರಣೀಯವಾಗಿದೆ.'

ವಿವೇಚನ ಗ್ರಂಥಮಾಲಾ ೪.

# ಅದನ್ನೇ ಉಂಡೇನು! ಕದತೆಗಿ!!

ವಿವೇಚನಾವಧಾನಿ.

(ನ. ಜ. ಗಾ)

'ಚೆನ್ನಿಗರಾಯನ ಮದುವೆ ಅಥವಾ ವೇಶ್ಯಾನರ್ತನದ ಪರಿಣಾಮ' 'ನ್ಯಾಯ
ವಾದಿ ರಾಮರಾಯರು ಅಥವಾ ಗಣಪತಿಪೂಜೆಯ ಮಹಿಮೆ' 'ಬೇಸಾ
ಯ! ನೀಸಾಯ!! ನಿನ್ನ ಮನೆ ಮುಂದಿಯಲ್ಲ ಸಾಯ!!!
ಅಥವಾ ಒಕ್ಕಲಿಗ' 'ಸಮಾನ ಸಂಬಂಧ ಅಥವಾ
ಅಧ್ಯಾಪಕ ನೀಲಕಂಠರಾಯರು' 'ನನ್ನ ಅನು
ಭವ ಅಥವಾ ಸುಖದುಃಖಗಳ ವಿಮರ್ಶೆ'
ನವೀನಸ್ತ್ರೀ ಸ್ವಾತಂತ್ರ್ಯ ಅಥವಾ
ಸ್ತ್ರೀಪುರುಷರಿಬ್ಬರೂ
ಸಮರು.

ಇವುಗಳ ಕರ್ತರು.

ವಿವೇಚನ ಗ್ರಂಥಮಾಲಾ ಆಫೀಸ್,

ಹೊಳೇನರಸೀಪುರ.



ಬೆಲೆ ೦—೪—೦



ಪುಟಗಳು ಒಂದರಿಂದ ಐವತ್ತಾರರ 56 ರ ಪೂರ್ತ ಹಾಸನದಲ್ಲಿರುವ ಸತ್ಯನಾರಾಯಣ ಪ್ರೆಸ್ಸಿನಲ್ಲಿಯೂ, ಮುಖಪತ್ರ ಪೀಠಿಕೆ ಮೊದಲಾದುವು, ಹೊಳೇನರಸೀಪುರದ ಲಕ್ಷ್ಮೀನರಸಿಂಹ ಪ್ರೆಸ್ಸಿನಲ್ಲಿಯೂ ಅಚ್ಚಾಗಿರುತ್ತದೆ.





## —: ಪೀಠಿಕೆ :—

ನನ್ನ ತಮ್ಮನ ಬಾಯಲ್ಲಿ ಯಾವಾಗಲೂ, ಮಾತು ಮಾತಿಗೂ, **'ಅದನ್ನೇ ಉಂಡೇನು! ಕದಕೆಗಿ!!'** ಎನ್ನುವಂತೆ ಎಂಬ ಮಾತು ಬರುತ್ತಿತ್ತು. ಅವನಿಗದು ಹಕ್ಕಿನಮಾತಾಗಿ (Patent Word) ಹೋಗಿತ್ತು. ನನಗೂ ಅದನ್ನು ಕೇಳಿ ಕೇಳಿ ಬೇಸರವಾಗಿ, ಅವನು ಹೇಳುವುದು ನಿಶ್ಚಯವೇ ಎಂಬುದನ್ನು ಪರೀಕ್ಷಿಸಬೇಕೆಂದೂ, ಈ ಮಾತು ಎಷ್ಟರಮಟ್ಟಿಗೆ ನಿಜ-ಸುಳ್ಳು ಎಂಬುದನ್ನು ನಿರ್ಣಯಿಸಬೇಕೆಂದೂ ತೋರಿತು. ಅದರಂತೆಯೇ ನನ್ನ ಪರೀಕ್ಷೆಯು, ನನ್ನ ಮನೆಯಿಂದಲೇ ಆರಂಭವಾಗಿ, ಕಟ್ಟಿಗೆ (ಸೌದೆ) ಹೊರೆಯುವನಲ್ಲಿ ಕೊನೆಗಂಡಿತು. ಅಷ್ಟು ಸಂದರ್ಭಗಳಲ್ಲಿಯೂ, ನನಗೆ ನನ್ನ ತಮ್ಮನ ಹಕ್ಕಿನಮಾತು ನಿಜವೆಂದೇ ಕಂಡುಬಂದಿತು. ಅದನ್ನೇ ನಿಮಗೂ ತಿಳಿಸಬೇಕೆಂದು ಇದನ್ನು ಬರೆದನು.

ಇನ್ನು 'ನನ್ನ ಅನುಭವಕ್ಕೆಬಂದ ವಿಷಯುಗಳನ್ನು ಇದ್ದುದು ಇದ್ದಂತೆಯೇ ಬರೆದು, ನಿಮ್ಮ ಮುಂದಿಟ್ಟಿರುತ್ತೇನೆ. ಅಲ್ಲದೆ ಅದರ ಗುಣದೋಷಗಳನ್ನೂ, ನ್ಯಾಯಾನ್ಯಾಯುಗಳನ್ನೂ, ಅವುಗಳನ್ನು ಎಷ್ಟರಮಟ್ಟಿಗೆ ನಿಮ್ಮ ಆಚರಣೆಯಲ್ಲಿ ತರಬೇಕು ಅಥವಾ ಬಿಡಬೇಕು' ಎಂಬುದನ್ನೂ ನಿಮ್ಮಪಾಲಿಗೇ ಬಿಟ್ಟಿರುವೆನು.

ಇನ್ನು ನನ್ನ ಸ್ವಂತ ತಪ್ಪುಗಳೇನಾದರೂ ಇದ್ದರೆ, ಅದನ್ನು ದಯುವಿಟ್ಟು ತಿಳಿಸಿದರೆ, ಕೃತಜ್ಞತೆಯಿಂದ ಮುಂದಿನ ಮುದ್ರಣದಲ್ಲಿ ತಿದ್ದಿಕೊಳ್ಳುವೆನು.

**ಪುಸ್ತಕವು ಆತುರದಲ್ಲಿ ಅಚ್ಚಾದುದರಿಂದಲೂ, ಪ್ರೂಪ್‌ಕಾಪಿಯನ್ನು ಸರಿಯಾಗಿ ನೋಡಲು ತಕ್ಕಷ್ಟು ಅವಕಾಶವು ದೊರೆಯದಿದ್ದುದರಿಂದಲೂ ಆಗಿರುವ, ಕೆಲವು ಅಚ್ಚಿನ ತಪ್ಪುಗಳಿಗೋಸ್ಕರ ವಾಚಕರ ಕ್ಷಮೆ ಬೇಡುತ್ತೇನೆ.**

ವಿಧೇಯ, ಗ್ರಂ. ಕ.

# ವಿಷಯಸೂಚಿಕೆ.



ಪ್ರಕರಣಗಳು. ಪುಟ.



ವಿ. ಸೂ:—ಪ್ರತಿಯೊಂದು ಪ್ರಕರಣವನ್ನೋದುವಾಗಲೂ, ನಿಮ್ಮ ಮನಸ್ಸಿನಲ್ಲೇಳುವ ಆತುರದ ಪ್ರಶ್ನೋತ್ತರಗಳಿಗೆ ನಾವು ಹೊಣೆಗಾರರಲ್ಲ.

॥ ಶ್ರೀ ॥

# —: ಸಿರಿಗನ್ನಡಂಗೆಲ್ಗೆ :—

## ೧ನೆಯ ಪ್ರಕರಣ.

ರಾತ್ರಿ ಎಂಟು ಗಂಟೆಯ ಸಮಯ! ಊಟಮಾಡಿಕೊಂಡು, ಚಿಕ್ಕ ಮನೆಯಲ್ಲಿ ಓದುತ್ತ ಕುಳಿತುಕೊಂಡಿದ್ದೆನು. ಆವಾಗ ನನ್ನ ತಮ್ಮನು, ನನ್ನಲ್ಲಿ ಮಾತನಾಡಲು ಬಂದು, ಆ ಸುದ್ದಿ ಈ ಸುದ್ದಿಗಳನ್ನು ಹೇಳುತ್ತ, ತನ್ನ ಸ್ವಂತದ (ಹಕ್ಕಿನ), ಮಾತಾದ, [patent word] 'ಅದನ್ನೇ, ಉಂಡೇನು! ಕದ ತೆಗಿ!' ಎಂಬಂತೆ.......... ಎಂದನು. ಅಷ್ಟರಲ್ಲೇ ನನ್ನ ಹೆಂಡತಿಯು, 'ರಾಮುವು ನಾನು ಹೇಳಿದುದಕ್ಕೆ; 'ಹು' ಎಂದು ಹೇಳದೆ ಆಗುವುದಿಲ್ಲ ಒಲ್ಲೆನೆಂದು ಹಠ ಮಾಡುತ್ತಿರುವನು' ಎಂದಳು. ನಾನು ಅದೇಕೆಂದು ಕೇಳಿದೆನು, ಅದಕ್ಕವಳು, "ಎಲೋ ನಾಳೆ ಹಬ್ಬ! ಎಲ್ಲಾ ಅಡಿಗೆಗಳನ್ನು ಮಾಡಿ, ದೇವರಿಗಿಡಬೇಕು. ಅದೂ ಬೆಳಗಿನ ಹತ್ತು ಗಂಟೆಯೊಳಗಾಗಬೇಕು! ಇಲ್ಲದಿದ್ದರೆ, ಅವರಿಗೆ ಊಟಮಾಡಿಕೊಂಡು, ಆಫೀಸಿಗೆ ಹೋಗಲು ಹೊತ್ತಾಗುವುದು! ಆದುದರಿಂದ ನಿನಗೆ ಬೆಳಿಗ್ಯೆ, ಎದ್ದ ಒಡನೆಯೆ, ಬೇರೆ ಬಿಸಿಬಿಸಿಯಾಗಿ ತಿಂಡಿಯನ್ನು ಮಾಡುತ್ತ ಕುಳಿತುಕೊಂಡರೆ, ಬಹಳ ಹೊತ್ತಾಗುವುದು! ಆದುದರಿಂದ, ಇವತ್ತು ಮಾತ್ರ, ಸ್ವಲ್ಪ ಅನ್ನವನ್ನು ಮಿಗಿಸಿ, ನೀರಿನೊಳಗೆ ಹಾಕಿಡುತ್ತೇನೆ! ಬೆಳಿಗ್ಯೆ ಎದ್ದು ಮುಖವನ್ನು ತೊಳೆದು, ಮೊಸರನ್ನೂ ಉಪ್ಪನ್ನೂ ಹಾಕಿಕೊಂಡು, ಊಟಮಾಡಿ ಶಾಲೆಗೆ [ಮಠಕ್ಕೆ—ಸ್ಕೂಲಿಗೆ] ಹೋಗಿ ಬಾ! ನೀನು ಶಾಲೆಯಿಂದ ಬಂದ ವೊಡನೆಯೇ, ನಿನಗೆ ಎಲ್ಲವನ್ನೂ ಬಿಸಿಬಿಸಿಯಾಗಿ ಬಡಿಸುತ್ತೇನೆ" ಎಂದು ಎಷ್ಟು ಹೇಳಿದರೂ, 'ನಾನು ತಂಗಳನ್ನು ತಿನ್ನುವುದಿಲ್ಲ ಹಾಗೆಯೇ ಹೋಗುತ್ತೇನೆಂದು' ಹಠಮಾಡುತ್ತಾನೆ ಎಂದಳು.

ಆಗ ನಾನು, 'ಹೋಗಲಿ, ಅವನ ಇಷ್ಟದಂತೆಯೆ ಸ್ವಲ್ಪ ಹೊತ್ತಿಗೆ ಮುಂಚೆಯೆ ಎದ್ದು, ಅವನಿಗೆ ಬೇಕಾದುದನ್ನು ಮಾಡಿಡು' ಎಂದು ಹೇಳಲಿಕ್ಕಿದ್ದವನು, ನನ್ನ ತಮ್ಮನ ಮಾತು ಜ್ಞಾಪಕಕ್ಕೆ ಬರಲು, ಇದನ್ನು ಪರೀಕ್ಷಿಸಲು ಒಳ್ಳೆಯ ಸಮಯವು ಸಿಕ್ಕಿತೆಂದು ಯೋಚಿಸಿ, 'ಹೇಗಾದರೂ ಆಗಲಿ, ಸ್ವಲ್ಪ ಅನ್ನವನ್ನು ಮಿಗಿಸಿಟ್ಟರು! ಬೆಳಿಗ್ಯೆ ನೋಡಿಕೊಳ್ಳೋಣ' ಎಂದೆನು. ಅದರಂತೆಯೆ, ಅವಳು ಸ್ವಲ್ಪ ಅನ್ನವನ್ನು ಮಿಗಿಸಿ, ನೀರಿಗೆ ಹಾಕಿಟ್ಟಳು.

ಬೆಳಗಾಯಿತು! ನಾನು ಮನೆಯಲ್ಲಿಯೇ ಇದ್ದೆನು! ರಾಮುವು ಎದ್ದು, ಮುಖವನ್ನು ತೊಳೆದುಕೊಂಡು 'ಅಮ್ಮಾ ನನಗೆ ತಿಂಡಿಕೊಡು, ಮಠಕ್ಕೆ ಹೋಗಬೇಕೆಂದನು.' ಅದಕ್ಕವಳು, 'ಅಗೋ! ಅಲ್ಲಿ ಬೆಳ್ಳಿಯ ತಟ್ಟೆಯಲ್ಲಿ ಮೊಸರನ್ನವನ್ನಿಟ್ಟಿರುವೆನು, ಊಟಮಾಡಿ ಹೋಗು' ಎಂದಳು. ಅದಕ್ಕವನು ಅದು ನನಗೆ ಬೇಡ, ಬೇರೆ ತಿಂಡಿಯನ್ನು ಕೊಡು' ಎಂದನು. ಅವಳು 'ಬೇರೆತಿಂಡಿಗಿಂಡಿಯೇನೂ ಇಲ್ಲ! ಇಷ್ಟವಿದ್ದರೆ ಅದನ್ನು ತಿನ್ನು ಇಲ್ಲವಾದರೆ ಹಾಗೆಯೇ ಹೋಗು' ಎಂದಳು. ಅವನು 'ಊಟಮಾಡದೆ ಹಾಗೆಯೇ ಹೋಗುತ್ತೇನೆಂದು' ಅಡಿಗೆಯ ಮನೆಯಿಂದ, ನಾಲ್ಕು ಹೆಜ್ಜೆಗಳು ಮುಂದಕ್ಕಿಟ್ಟನು. ಅದನ್ನು ನೋಡಿ ಅವಳು, ಬೇಡ! ಬೇಡ ಹಾಗೆಯೇ ಹೋಗಬೇಡ! ನಿನಗೆ ತಕ್ಕದ್ದಾಗುವುದು!' ಎನ್ನುತ್ತ ಅವನ ಹಿಂದುಗಡೆಯೇ ಬಂದಳು.

ಎಷ್ಟಾದರೂ ಹೆತ್ತಹೊಟ್ಟೆಯಲ್ಲವೆ! ಮುದ್ದು ಮಗನು ಬರಿಯ ಹೊಟ್ಟೆಯಲ್ಲಿ ಮಠಕ್ಕೆ ಹೋಗುವುದು ಅವಳಿಗೆ ಸಹಿಸಲಿಲ್ಲ! ಸೋಮಾರಿತನವನ್ನು ಬಿಟ್ಟು, ಮುಂಚೆಯೆ ಎದ್ದು, ಅವನಿಗೆ ಬೇಕಾದುದನ್ನು ಮಾಡಿಕೊಡುವುದಕ್ಕೂ ಮನಸ್ಸಿಲ್ಲ! ಏನು ಮಾಡಿಯಾಳು! ನನ್ನಲ್ಲಿಗೆ ಬಂದಳು! 'ನೋಡಿ ಎಷ್ಟು ಹೇಳಿದರೂ ಕೇಳದೆ, ಹಠಮಾಡಿಕೊಂಡು, ಅನ್ನತಿನ್ನದೆ ಹಾಗೆಯೆ ಹೋಗುತ್ತಾನೆ! ನೀವಾದರೂ ಸ್ವಲ್ಪ ಹೆದರಿಸಿ ಹೇಳಬಾರದೆ?' ಎಂದಳು. ನಾನು ಹೇಳಿದೆ. 'ಅವನು ಹತ್ತು ಗಂಟೆಗೆ ಬಂದೇ ಊಟಮಾಡಲಿ, ಇವತ್ತು ಹಬ್ಬದ ಊಟವಾದುದರಿಂದ, ಅವನು ಈಗಲೂ ಊಟಮಾಡಿ ಆಮೇಲೂ ಊಟಮಾಡಿದರೆ, ಅವನಿಗೆ ಅಜೀರ್ಣವಾಗಬಹುದು! ಸ್ವಲ್ಪ ತಡೆದುಕೊಂಡು ಸುಮ್ಮನಿರು! ಅವನು ಹಾಗೆಯೇ ಹೋಗಿ ಬರಲಿ

ೊಂದರೆಯೇನೂ ಇಲ್ಲ!' ಎಂದೆನು. ಆದರೆ ನಾನು ಈ ಮಾತನ್ನು ಮನಃ ೂರ್ವಕವಾಗಿ ಹೇಳಲಿಲ್ಲವೆಂಬುದೂ, ಏನೋ ಒಂದು ಉದ್ದೇಶ್ಯವನ್ನಿಟ್ಟು ೊಂಡೇ ಹಾಗೆ ಹೇಳಿದೆನೆಂಬುದೂ, ನಿಮಗೆ ಗೊತ್ತಿರಬಹುದು.

ಇರಲಿ, ಅವನು [ರಾಮುವು] ಹಾಗೆಯೆ ಹೋಗುತ್ತೀನೆಂದು ಹೇಳಿದ ನು, ಬೀದಿಯ ಬಾಗಿಲನ್ನು ದಾಟಿ, ಹತ್ತು ಮಾರುಗಳ ದೂರ ಹೋಗಿ ರಿಗಿನೋಡಿದನು 'ಯಾರಾದರೂ ತನ್ನನ್ನು ಇನ್ನೂ ಬಲಾತ್ಕಾರಮಾಡಿ ೂಟಮಾಡಿಸುವರೋ' ಎಂದು. ಯಾರೂ ಬರಲಿಲ್ಲ! ಮತ್ತೂ ಹತ್ತು ಮಾರು ಳ ದೂರ ಹೋದನು! ತಿರಿಗಿ ನೋಡಿದ! ಆದರೂ ಯಾರೂ ಅವನನ್ನು ಲಾತ್ಕರಿಸಲು ಬಂದಿರಲಿಲ್ಲ! ಅಷ್ಟಕ್ಕೇ ಅವನ ಧೈರ್ಯವೆಲ್ಲ ಹೋಯಿತು! ಣ್ಣಿನಲ್ಲಿ ಸ್ವಲ್ಪ ನೀರೂ ತುಂಬಿತು. ಆದರೂ ನೋಡೋಣವೆಂದು ಹೇಳಿ, ನ್ನೂ ಹತ್ತು ಮಾರು ದೂರ ಹೋಗಿ ತಿರಿಗಿ ನೋಡಿದ! ಯಾರೂ ಬಾರ ದ್ದುದನ್ನು ನೋಡಿ, ಕಣ್ಣಿನಲ್ಲಿ ನೀರು ಸುರಿಸುತ್ತ, ಮನೆಗೆ ಹಿಂತಿರುಗಿದ! ಾನು ಇದೆಲ್ಲವನ್ನೂ ಅವನಿಗೆ ತಿಳಿಯದಂತೆ, ಗಾಜಿನ ಕಿಟಕಿಯಲ್ಲಿ ೋಡುತ್ತಿದ್ದೆನಾದುದರಿಂದ, ಒಡನೆಯೆ ಒಳಕ್ಕೆ ಹೋಗಿ, ನನ್ನ ಹೆಂಡತಿಗೆ ಅವನು ಅಳುತ್ತಾ ಹಿಂತಿರುಗಿ ಬರುತ್ತಿದಾನೆ. ಈ ವೇಳೆಯಲ್ಲಿ ನೀನು ಸ್ವಲ್ಪ ಬಿಗಿಯಾಗಿದ್ದರೆ, ಮುಂದೆಂದೂ ಅವನು ಇನ್ನು ಹಠಮಾಡುವುದಿಲ್ಲ ೆಂದು' ಹೇಳಿ, ಏನೂ ತಿಳಿಯದವನಂತೆ ಚಿಕ್ಕಮನೆಯಲ್ಲಿ ಹೋಗಿ ಕುಳಿತು ಕೊಂಡೆನು. [ನಮ್ಮ ಮನೆಯಲ್ಲಿ ಹೆಚ್ಚು ಜನಗಳು ಇರಲಿಲ್ಲವಾದುದರಿಂದ, ಸಾಮಾನ್ಯವಾಗಿ ನಾವು ಒಳಗೆ ಕೆಲಸಮಾಡುವಾಗಲೆಲ್ಲ, ಕೈಕೈಗೂ ಬಾಗಿಲು ಹಾಕಿಕೊಂಡೇ ಒಳಗಿರುವ ಪದ್ಧತಿಯಾದುದರಿಂದ, ಈಗಲೂ, ಅದರಂತೆಯೆ, ರಾಮುವು ಸ್ಕೂಲಿಗೆ ಹೋದೊಡನೆಯೇ ಬೀದಿಯ ಬಾಗಿಲನ್ನು ಚಿಲುಕ ಹಾಕಿದ್ದೆವು.]

ರಾಮುವು ಬಂದ! ಬಂದವನು ಬಾಗಿಲನ್ನು ನೂಕಿದ! ಬಾಗಿಲು ಹಾಕಿ ದ್ದಿತಾದ್ದರಿಂದ 'ಅಮ್ಮಾ! ಅಮ್ಮಾ! ಬಾಗಿಲು ತೆಗಿ' ಎಂದ. 'ಏಕೆ ಬಾಗಿಲು ತೆಗಿಯ ಬೇಕು? ಈಗ ಆಗುವುದಿಲ್ಲ! ಕೆಲಸವಾಗಿದೇನೆ! ಹೋಗು ಆಮೇಲೆ ಬಾ!' ಎಂದಳು. ಅದಕ್ಕವನು 'ತಿಂಡಿ ತಿಂದು ಹೋಗುತ್ತೇನೆ. ಬಾಗಿಲು ತೆಗಿಯಮ್ಮ.' ಎಂದನು. ಅದಕ್ಕವಳು 'ತಿಂಡಿಗಿಂಡಿಯೇನೂ

ಇಲ್ಲ. ಸುಮ್ಮನೆ ತಂಟೆ ಮಾಡಬೇಡ, ಸ್ಕೂಲಿಗೆ ಹೋಗಿ ಬಾ!' ಎಂದಳು. ಅದಕ್ಕವನು 'ಇಲ್ಲಮ್ಮಾ. ಇಲ್ಲ. ತಿಂಡಿಬೇಡ. ಮೊಸರನ್ನವಿದೆಯಲ್ಲ, "ಅದನ್ನೇ ಉಂಡೇನು! ಕದ ತೆಗಿ" ನಿಜವಾಗಿಯೂ ತಂಟೆಮಾಡುವುದಿಲ್ಲ.' ಎಂದನು.

ಇದನ್ನು ಕೇಳಿದೊಡನೆಯೆ ನನಗೆ ಫಕ್ಕನೆ ನಗು ಬಂದಿತು. ನನ್ನ ತಮ್ಮನ ಮಾತು ನಿದರ್ಶನಕ್ಕೆ ಬಂದಂತಾಯಿತು. ಕೂಡಲೆ ನಾನು ಮೌನವಾಗಿ ಹೋಗಿ, ಬಾಗಿಲು ಚಿಲುಕವನ್ನು ತೆಗೆದುಬಂದು, ನನ್ನ ಸ್ಥಾನದಲ್ಲಿ ಕುಳಿತುಕೊಂಡೆನು. ಅವನೂ ಕೂಡ, ಯಾವ ಮಾತನ್ನೂ ಆಡದೆ, ಬಾಗಿಲನ್ನು ನೂಕಿ, ಒಳಕ್ಕೆ ಬಂದು, ಅಲ್ಲಿಟ್ಟಿದ್ದ ಚಂಬಿನಲ್ಲಿರುವ ನೀರಿನಿಂದ, ನೆಪಕ್ಕೆ ಕಾಲುತೊಳೆದುಕೊಂಡಂತೆ ಮಾಡಿ, ಒಳಕ್ಕೆ ಹೋಗಿ, ಮುಚ್ಚಿಟ್ಟಿದ್ದ ಅನ್ನವನ್ನು ತಿಂದು, ತಟ್ಟೆಯನ್ನು ಅಲ್ಲಿಯೇ ಬಿಟ್ಟು, ಸಿಟ್ಟಿನಿಂದ ಯಾರನ್ನೂ ಮಾತನಾಡಿಸದೆ, ಕೈ ತೊಳೆದುಕೊಂಡು ಸ್ಕೂಲಿಗೆ ಹೋದನು.

---

## 2ನೆಯ ಪ್ರಕರಣ.

ಅಸಿಸ್ಟೆಂಟ್ ಎಂಜನಿಯರ್ ರಂಗರಾಯರು, ನನ್ನ ಪ್ರಾಣ ಸ್ನೇಹಿತರು. ಅವರೂ ನಾನೂ ನಾಲ್ಕನೆಯ ಫಾರಂ ಲಾಗಾಯ್ತು (IV Form) ಬಿ. ಎ. (B. A.) ತರಗತಿಯ ಪೂರ್ತ ಜತೆಯಲ್ಲಿಯೇ ಓದಿದೆವು. ಜತೆಯಲ್ಲೇ ವಾಸಮಾಡಿದೆವು. ಜತೆಯಲ್ಲೇ ಊಟ ಮಾಡುತ್ತಿದ್ದೆವು—ಆಟವಾಡುತ್ತಿದ್ದೆವು. ಆದುದರಿಂದ ಅವರೂ ನಾನೂ ಬೇರೆ ಬೇರೆ ಊರಿನಲ್ಲಿರುತ್ತಿದ್ದರೂ, ಇಬ್ಬರ ಮನಸ್ಸೂ ಒಂದೇ ಕಡೆಯಲ್ಲಿದ್ದಿತು. ವಾರಕ್ಕೊಂದು ಕಾಗದವಾದರೂ ಅವರಿಂದ ಬಾರದಿದ್ದರೆ, ನನಗೆ ಹೇಗೆ ಹೇಗೋ ಅನ್ನಿಸುತ್ತಿತ್ತು. ಅವರಿಗೂ ಹಾಗೆಯೆ.

ರಂಗರಾಯರ ಮಗ ಶಂಕರಪ್ಪನಿಗೆ ಈ ವರುಷ ಬಿ.ಎ. (B A.) ಪರೀಕ್ಷೆಯಾಯಿತು. ಇನ್ನೂ ಹದಿನೆಂಟು ವರುಷ. ಇವನೇ ಹಿರಿಯ ಮಗನಾದ

ದರಿಂದ, ಗಂಡಹೆಂಡಂದಿರಿಬ್ಬರಿಗೂ, ಈ ವರುಷವೇ ಇವನಿಗೆ ಮದುವೆಮಾಡಿ, ನೋಡಿ ಸಂತೋಷಪಡಬೇಕೆಂಬ ಆಶೆಯಿದ್ದಿತು. ದೊಡ್ಡ ಮನುಷ್ಯರಾದುದರಿಂದ, ಎಷ್ಟೋ ಜನರು, ನಾನುತಾನೆಂದು ಹೆಣ್ಣುಕೊಡಲು ಬಂದರು. ಅವರಲ್ಲಿ ಶ್ರೀನಿವಾಸರಾಯರೆಂಬುವರು ಒಬ್ಬರು.

ಶ್ರೀನಿವಾಸರಾಯರೆಂಬುವರು, ಅಲ್ಲಿಯ ಅಸಿಸ್ಟೆಂಟ್ ಕಮಿಷನರು. ಅವರಿಗೆ ಹತ್ತೇ ವರ್ಷದ 'ಗೌರಮ್ಮ' ನೆಂಬ ಮಗಳಿದ್ದಳು. ಶ್ರೀನಿವಾಸ ರಾಯರಿಗೆ, ಈಗಲೇ ಮದುವೆ ಮಾಡುವ ಉದ್ದೇಶ್ಯವಿಲ್ಲದಿದ್ದರೂ, ಉತ್ತಮವಾದ ವರನು ಈಗ ಕೈತಪ್ಪಿಹೋದರೆ, ಮುಂದೆ ಇವನಷ್ಟು ಉತ್ತಮನಾದ ವರನು ಸಿಗುವನೋ ಇಲ್ಲವೊ ಎಂಬುದಕ್ಕೋಸ್ಕರ, ಈಗಲೇ ಮಗಳಿಗೆ ಮದುವೆ ಮಾಡಲು ನಿಷ್ಕರ್ಷಿಸಿದರು.

ಶ್ರೀನಿವಾಸರಾಯರೂ, ಸ್ವಭಾವದಲ್ಲಿ ಒಳ್ಳೆಯವರೇನೇ. ವೈದಿಕ ಪದ್ಧತಿಯಲ್ಲಿ ಬಹಳ ಆಸಕ್ತಿಯಿದ್ದಿತು. ಪ್ರತಿನಿತ್ಯವೂ ಅವರೇ ಸ್ವತಃ ದೇವರ ಪೂಜೆಮಾಡುತ್ತಿದ್ದರು. ಈಗಿನ ಕಾಲದ ನವೀನ ಪದ್ಧತಿಗಳೊಂದೂ ಅವರಲ್ಲಿರಲಿಲ್ಲ. ಆದರೆ ಬಾಯಿ ಮಾತ್ರ ಸ್ವಲ್ಪ ಕಠಿಣವೆಂದೇ ಹೇಳಬೇಕು. ಕೆಲವರನ್ನು ಕಂಡರೆ, ಕೀಳುತರದಲ್ಲಿ ಹಾಸ್ಯಮಾಡುತ್ತಿದ್ದರು. ಆಗಾಗ್ಯೆ ಅವರ ಬಾಯಲ್ಲಿ ಬರಬಾರದ ಮಾತು ಕೂಡ ಬರುವುದುಂಟು. ಆದರೂ ಜನಗಳು, ಅವರ ಉಪ್ಪುತಿಂದಿದ್ದೇವೆಂತಲೊ—ಅವರು ಅಧಿಕಾರಸ್ಥರೆಂದೋ—ಎಷ್ಟಾದರೂ ಅವರ ಹೃದಯವು ಒಳ್ಳೆಯದೆಂದೋ "ಏನಾದರೂ ಅಂದುಕೊಳ್ಳಲಿ, ನಮ್ಮ ಕೆಲಸವಾದರೆ ಸೈ" ಎಂದೋ—ಅಂತೂ, ಅಷ್ಟಾಗಿ ಯಾರೂ ಅವರಿಗೆ ಎದುರು ಮಾತಾಡದೆ, ಹುಸಿನಗೆಯನ್ನು ನಗುತ್ತ ಹೋಗುತ್ತಿದ್ದರು. ಆದರೆ, ಪರೋಕ್ಷದಲ್ಲಿ ಮಾತ್ರ, ಇವರನ್ನು ಆಡಿಕೊಳ್ಳುತ್ತಿದ್ದರೆನ್ನುವುದರಲ್ಲಿ ಅನುಮಾನವೇನೂಯಿರಲಿಲ್ಲ.

ಇರಲಿ, ಸದ್ಯಕ್ಕೆ ನಮ್ಮ ವಿಷಯವನ್ನು ನೋಡೋಣ, ಶ್ರೀನಿವಾಸ ರಾಯರ ಮಗಳು ಗೌರಮ್ಮನನ್ನು, ರಂಗರಾಯರ ಮಗ ಶಂಕರಪ್ಪನಿಗೆ ಕೊಟ್ಟುಮದುವೆ ಮಾಡುವುದೆಂದು ನಿಷ್ಕರ್ಷೆಯಾಯಿತು. ಒಡನೆಯೇ.

ನನಗೆ ರಂಗರಾಯರಿಂದ, ಪ್ರತ್ಯೇಕ (ಸ್ಪೆಷಲ್) ಲಗ್ನಪತ್ರಿಕೆಯು ಬಂದಿತು. ಅದರಂತೆಯೆ ನಾನೂ ಎರಡು ದಿನ ಮುಂಚೆಯೇ ಹೋಗಿ, ರಂಗರಾಯರ ಜತೆಯಲ್ಲಿ ಸೇರಿ, ಅವರ ಕೆಲಸಗಳಿಗೆ ಸಹಾಯಮಾಡಿದೆನು.

ಈ ದಿವಸ ರಾತ್ರಿ ವರಪೂಜೆ. ಅದರ ವೈಭವವನ್ನು ನಿಮಗೆ ವರ್ಣಿಸ ಬೇಕಾದುದಿಲ್ಲ. ಏಕೆಂದರೆ, ಒಬ್ಬರು ಆಸಿಸ್ಟೆಂಟ್ ಕಮಿಷನರು—ಮತ್ತೊಬ್ಬರು ಅಸಿಸ್ಟೆಂಟ್ ಎಂಜನಿಯರು. ಸ್ವಲ್ಪ ಹೆಚ್ಚು ಕಡಿಮೆ ಸಮಾನವಾದ ಬೀಯಗತನ. ಸಾಮಾನ್ಯ ಜನಗಳ ಮನೆಯಲ್ಲೇ, ಮದುವೆಯೆಂದರೆ ಎಂದೂ ಇಲ್ಲದ ಸಂಭ್ರಮವಿರುವುದು. ಇನ್ನು ಇಂತಹವರ ಮನೆಯಲ್ಲಿ ಕೇಳಬೇಕೆ? ಒಂದಕ್ಕೆ ಇಪ್ಪತ್ತರಷ್ಟೆಂದೇ ಹೇಳಬೇಕು. ವರಪೂಜೆಯಲ್ಲಿ ಅಳಿಯನಿಗೆ ಕೊಡಬೇಕಾದ ಬಳುವಳಿಗಳೆಲ್ಲವೂ ಕ್ರಮವಾಗಿಯೇ ಕೊಡಲ್ಪಟ್ಟಿತು. ಅರ್ಧಸಾವಿರಕ್ಕೇನೂ ಕಡಿಮೆಯಿಲ್ಲವೆಂದು ಹೇಳಬಹುದು. ಬಂದವರಿಗೆಲ್ಲ ತಲೆಗೊಂದಾಣೆ ದಕ್ಷಿಣೆ, ತೆಂಗಿನಕಾಯಿಗಳು. ಹೂವು ಗಂಧಗಳು ಬೇರೆ. ಮೆರವಣಿಗೆಗೆ ರಾಯರ ಮೋಟಾರು. ಎರಡು ಪಕ್ಕಗಳಲ್ಲೂ ಹತ್ತು ಹತ್ತು ಗ್ಯಾಸ್ (ವಾಯು) ದೀಪಗಳು. ಎರಡು ಜತೆಬ್ಯಾಂಡ್ ವಾದ್ಯದವರು. ಇನ್ನು ಬಂಧುಬಳಗದವರು, ಕೈಕೆಳಗಣ ಅಧಿಕಾರಿಗಳು—ಸೇವಕರು-ಪರಿವಾರದವರು-ಎಲ್ಲರೂ ಹಿಂದು ಮುಂದುಗಡೆಯಲ್ಲಿ! ಇನ್ನೇನು ಹೇಳಿರಿ! ಹೀಗೆ ಎಲ್ಲವೂ ಸಾಂಗವಾಗಿ ನಡೆದು, ನಮಗೆಲ್ಲ ಊಟವಾಯ್ತು. ಅದನ್ನು ಬೇರೆ, ವಿವರಿಸಿ, ನಿಮಗೆ ಬೇಸರವನ್ನುಂಟುಮಾಡಲು ಇಷ್ಟವಿಲ್ಲದ್ದರಿಂದ ಮುಂದಲ ವಿಷಯವನ್ನು ಹೇಳುತ್ತೇನೆ.

ಮೂರನೆಯ ದಿನ ವ್ರತ ಸಮಾವರ್ತನೆ. ಸುಬ್ಬಾವಧಾನಿಗಳೇ ಇವರಿಬ್ಬರ ಮನೆಯ ಪುರೋಹಿತರು. ಇದರ ಮಧ್ಯೆ ಇನ್ನೊಂದು ವಿಷಯ: ಬೀಗರು ಬೀಗರು ಸಮಾನ ದೊಡ್ಡಸ್ತಿಕೆಯವರಾದರೂ, ಎರಡು ಕಡೆಯ ಎಲ್ಲಾ ಖರ್ಚುಗಳೂ ಶ್ರೀನಿವಾಸರಾಯರದೆಂಬುದನ್ನು ಮಾತ್ರ ಮರೆಯಬೇಡಿರಿ. ಆದುದರಿಂದ ಶ್ರೀನಿವಾಸರಾಯರು, ದುಡ್ಡಿನ ಥೈಲಿಯನ್ನು ತೆಗೆದುಕೊಂಡು ಬಂದು, ತಮ್ಮ ಮಗ ಸುಬ್ಬರಾಯನ ಕೈಯಲ್ಲಿ ಕೊಟ್ಟು, ಇಂಗ್ಲೀಷಿನಲ್ಲಿ ‘four : ore’ (4 : 1, ನಾಲ್ಕೊಂದರ ಪ್ರಮಾಣ) ಎಂದು

ಹೇಳಿ ಹೊರಟುಹೋದರು. ಅದರ ಅರ್ಥವೇನೆಂಬುದು ನಿಮಗೂ ಗೊತ್ತಾಗಿರಬಹುದು. ಪುರೋಹಿತರು ಒಂದು ರೂಪಾಯಿ ಕೇಳಿದರೆ, ನಾಲ್ಕಾಣೆ; ಎಂಟಾಣೆಗಳನ್ನು ಕೇಳಿದರೆ, ಎರಡಾಣೆ; ನಾಲ್ಕಾಣೆಗಳನ್ನು ಕೇಳಿದಾಗ, ಒಂದಾಣೆ; ಒಂದಾಣೆ ಕೇಳಿದರೆ ಮೂರೇಕಾಸು; ಈ ರೀತಿ ಕೊಡಬೇಕೆಂದು ಅದರ ಒಳಗುಟ್ಟು. ಸುಬ್ಬರಾಯನೂ, 'ಅದರಂತೆಯೇ' ಎಂದು ತಲೆಯಾಡಿಸಿದನು.

ಸರಿ. ಆರಂಭವಾಯಿತು. ಗಣಪತಿ ಪೂಜೆಗೆ. ದಕ್ಷಿಣೆಯನ್ನು ಕೇಳುವುದಕ್ಕೆ. ಸುಬ್ಬಾವಧಾನಿಗಳು, ಪೌರೋಹಿತ್ಯದಲ್ಲಿ ಬಹಳ ಗಟ್ಟಿಗರಾದುದರಿಂದ, ಮಂತ್ರಗಳನ್ನು ಸ್ಪಷ್ಟವಾಗಿಯೂ, ಗಟ್ಟಿಯಾಗಿಯೂ, ಬೇಗಬೇಗನೆಯೂ ಹೇಳುತ್ತಿದ್ದರು. ಆದರೆ ಮಧ್ಯೆ ಮಧ್ಯೆ, ಕೊನೆಯ ಪಕ್ಷ ಪ್ರತಿ ಐದು ನಿಮಿಷಗಳಿಗೊಂದಾವರ್ತಿಯಾದರೂ, ದಕ್ಷಿಣೆಯನ್ನು ಬಿಚ್ಚಿಸದೆ ಬಿಡುತ್ತಿರಲಿಲ್ಲ. ಏಕೆಂದರೆ, ಇತ್ತೀಚೆಗಲಾಗಿ ಅವರೂ, ದೊಡ್ಡ ಮನುಷ್ಯರ ಮನೆಯ ಪೌರೋಹಿತ್ಯಕ್ಕೆ ಬಂದುಬಂದು, ಅವರಿಂದ ಸ್ವಲ್ಪ ಮಟ್ಟಿಗೆ ಇಂಗ್ಲಿಷನ್ನು ಕಲಿತು, ಅದರಲ್ಲಿ ಆ ಮೇಲ್ಕಂಡ, ಮುಖ್ಯವಾದ 'four : one' (4 : 1) ಎಂಬುದನ್ನು ಮಾತ್ರ ಚನ್ನಾಗಿ ತಿಳಿದುಕೊಂಡಿದ್ದರು. ಆದುದರಿಂದ, ಒಂದೇ ಸಾರಿ ಕೇಳಿದರೆ, 'ಏನೂ ದುಡ್ಡು ವಸೂಲಾಗುವುದಿಲ್ಲವೆಂದೂ, ಸಾಧ್ಯವಾದ ಮಟ್ಟಿಗೆ, ನಿಮಿಷಕ್ಕೊಂದುಬಾರಿಯಾದರೂ ಕೇಳುತ್ತಿದ್ದರೆ, ಅವರು ಎಷ್ಟೇ ಕಡಮೆಯಾಗಿ ಕೊಟ್ಟರೂ, ಕೊನೆಗೆ ನಮಗೆ ಈ ದಿವಸ, ಒಂದು ಹಸ್ತಕ್ಕೇನೂ ಕಡಮೆಯಾಗಲಾರ' ದೆಂದು ಯೋಚಿಸಿ, 'ಇಗೋ. ಗಣಪತಿಪೂಜೆ. ಪುಣ್ಯಾಹ. ಅಂಜಲಿ ಪೂರಣ,..................' ಎಂದು ಹೇಳುತ್ತಲೇಯಿದ್ದರು. ಯಾವಾಗ ಕೇಳಿದರೂ ವ್ಯರ್ಥವೇನೂ ಆಗುತ್ತಿರಲಿಲ್ಲ. ಆದರೆ, ಈ ಮೇಲಿನ, ಅವಧಾನಿಗಳ ಗುಟ್ಟು ಮಾತ್ರ, ನಮ್ಮ ಸುಬ್ಬರಾಯನಿಗೆ ತಿಳಿಯಲಿಲ್ಲ.

ಕೊನೆಗೆ ಎಲ್ಲ ಕರ್ಮಗಳೂ ನಡೆದುವು. ವ್ರತಸಮಾವರ್ತನೆಯೂ ಜರುಗಿತು. ಆಗ ನಮ್ಮ ಸುಬ್ಬರಾಯನು, ಅವಧಾನಿಗಳನ್ನು ನೋಡಿ,

‘ಅವಧಾನಿಗಳೇ, ಸುಮ್ಮನೆ ಕೇಳುತ್ತೇನೆ. ಬೇರೆ ಅರ್ಥ ಮಾಡಬೇಡಿರಿ. ಈ ದಿನ ನೀವು ವಸೂಲು ಮಾಡಿದ ದುಡ್ಡೆಷ್ಟು?’ ಎಂದನು.

ಅವಧಾನಿಗಳು ಇವನನ್ನು ನಿರಾರಿಸಿದವರು. ‘ಅಪ್ಪಾ ನೀನೇ ಎಣಿಸು, ನನಗೆ ಆ ಕಷ್ಟವೂ ಬೇಡ.’ ಎಂದು ಹೇಳಿ, ತಮ್ಮ ಚಿಲ್ಲರೆ ದುಡ್ಡಿನ, ಚೌಕದ ಗಂಟನ್ನೇ ಕೊಟ್ಟರು. ಸುಬ್ಬರಾಯನು ಬಹಳ ಕುತೂಹಲದಿಂದ, ಎಲ್ಲ ವನ್ನೂ ಎಣಿಸಿ, ‘ಅವಧಾನಿಗಳೇ ಒಟ್ಟು ಐದು ರೂಪಾಯಿಗಳ ಚಿಲ್ಲರೆ ಯಿರುವುದು, ಸರಿ. ಈ ಒಂದು ದಿನಕ್ಕೆ ಐದು ರೂಪಾಯಿಗಳ ಸಂಪಾದನೆ. ತಿಂಗಳಿಗೆ 150 ರೂಪಾಯಿಗಳಾದವು. ಒಬ್ಬ ಅಮಲ್ದಾರರ ಸಂಬಳ. ಭೇಷ್. ಭೇಷ್. ಒಳ್ಳೆಯ ಸಂಪಾದನೆ. ನಾವೂ ಈ ಪೌರೋಹಿತ್ಯವನ್ನು ಕಲಿತಿದ್ದರೆ ಚನ್ನಾಗಿದ್ದಿತು. ಎಷ್ಟೋ ಜನಗಳನ್ನು ಪಾಪರ್ ಮಾಡಬಹು ದಾಗಿತ್ತು’ ಎಂದನು.

ಅದಕ್ಕಂದರು ಅವಧಾನಿಗಳು. ‘ಅಪ್ಪಾ ನೀನು ಹೇಳಿದ್ದು ನಿಜವೇ. ನಿಮ್ಮ ಮನೆಯಲ್ಲಿ ನೋಡು. ಈ ದಿನ ಸಾವಿರ ರೂಪಾಯಿಗಳ ಖರ್ಚು. ತಿಂಗಳಿಗೆ ಮೂವತ್ತು ಸಾವಿರವಾಯಿತು. ವರ್ಷಕ್ಕೆ 360 ಸಾವಿರವಾಯಿತು! ಇಷ್ಟು ಹಣವನ್ನು ಒದಗಿಸ ಬೇಕಾದರೆ, ರಾಜ್ಯದ ಪ್ರಜೆಗಳೆಲ್ಲರೂ ಪಾಪ ರಾಗಬೇಕು. ಹೌದೋ ಅಲ್ಲವೋ? ಆದುದರಿಂದ ನನ್ನ ಪೌರೋಹಿತ್ಯ ವಾಸಿಯೊ? ನಿನ್ನ ಅಸಿಸ್ಟೆಂಟ್ ಕಮಿಷನರ್‌ಗಿರಿವಾಸಿಯೋ? ನೀನೇ ಹೇಳಪ್ಪ.’ ಎಂದರು.

ಇದನ್ನು ಕೇಳಿದೊಡನೆಯೇ ಅಲ್ಲಿದ್ದವರೆಲ್ಲರೂ ಫಕ್ಕನೆ ನಕ್ಕರು, ನನ ಗೂ ನಗುಬಂದಿತು. ಸುಬ್ಬರಾಯನೂ, ನಾಚಿಕೆಯಿಂದ, ಸ್ವಲ್ಪ ಹೊತ್ತು ತಲೆ ಯನ್ನು ಬಗ್ಗಿಸಿಕೊಂಡಿದ್ದು, ಆ ಮೇಲೆ ಕತ್ತೆತ್ತಿಕೊಂಡು ಕೇಳಿದನು, ‘ಅವ ಧಾನಿಗಳೇ, ದಿನದಿನವೂ ಸಾವಿರ ರೂಪಾಯಿಗಳನ್ನು ಖರ್ಚುಮಾಡಲು ಸಾಧ್ಯವೇ? ಮೂರು ವರ್ಷಕ್ಕೋ ನಾಲ್ಕು ವರ್ಷಕ್ಕೋ ಒಂದು ಸಾರಿ, ಅದೂ ಮದುವೆ ಮುಂಜಿಗಳ ಕಾಲದಲ್ಲಿ, ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಲೇ ಬೇಕು. ಯತ್ನವಿಲ್ಲ. ನಿತ್ಯವೂ ಎಲ್ಲಿಂದ ತರುವುದು?’ ಎಂದನು.

ಅದಕ್ಕೆಂದರು ಅವಧಾನಿಗಳು, ‘‘ಅಪ್ಪಾ, ಅದನ್ನೇ ನನಗೂ ಏಕೆ ಅನ್ವಯಿಸಬಾರದು? ಇಂದು ನೀನು ಸಾವಿರ ರೂಪಾಯಿಗಳ ಖರ್ಚು ಮಾಡಿದ್ದರಿಂದಲ್ಲವೇ, ನನಗೆ ಐದು ರೂಪಾಯಿಗಳು ಬಂದದ್ದು? ಇಂದು ನೀನು ಮದುವೆಯನ್ನೇ ಮಾಡದಿದ್ದರೆ, ಐದು ರೂಪಾಯಿಗಳ ಮಾತಿರಲಿ, ಐದು ಆಣೆಗಳನ್ನಾದರೂ ಕೊಡುತ್ತಿದ್ದೆಯಾ? ಇಲ್ಲವೇ ಇಲ್ಲ! ನಿನ್ನ ಮಾತಿನಂತೆಯೇ ಎರಡು ಮೂರು ವರ್ಷಕ್ಕೊಂದುಸಾರಿ ಮಾತ್ರ ನಿಮ್ಮಗಳ ಮನೆಯಲ್ಲಿ ನನಗೆ ಸ್ವಲ್ಪ ಹೆಚ್ಚಿನ ದುಡ್ಡು ಸಿಗಬಹುದು! ಇಲ್ಲವೆಂದಲ್ಲ ಆದರೆ ಅದನ್ನು ವರ್ಷದ ದಿನಗಳಿಗೆಲ್ಲ ಹಂಚಿದರೆ, ಸರಾಸರಿ ಎಷ್ಟು ಬಿದ್ದೀತು? ನೀನೇ ಹೇಳು! ಹಾಗೂ, ಬೇರೆ ಬೇರೆ ಮನೆಗಳಲ್ಲಿ, ಬೇರೆ ಬೇರೆ ಕಾಲಗಳಲ್ಲಿ ಮದುವೆಯಾದರೆ, ಏನೋ ಸರಾಸರಿ ತಿಂಗಳಿಗೆ ಐದು ರೂಪಾಯಿಗಳಿಗೆ ಕಡಮೆಯಿಲ್ಲದೆ ಗಿಟ್ಟುವುದು! ಹಾಗಲ್ಲದೆ, ಏಕ ಕಾಲದಲ್ಲಿ ಎಲ್ಲರ ಮನೆಗಳಲ್ಲೂ ಮದುವೆ ಮುಂಜಿಗಳಾದರೆ, ಕೇಳಲೇಬೇಡ! ತಿಂಗಳಿಗೆ ಸರಾಸರಿ ಮೂರು ರೂಪಾಯಿಗಳೂ ಸಹ ಗಿಟ್ಟುವುದಿಲ್ಲ! ಇಷ್ಟು ದೂರ ಯೋಚಿಸದೆ, ಸುಮ್ಮನೆ ಏನೇನೋ ಹೇಳಿಬಿಟ್ಟೆಯಲ್ಲಪ್ಪ’’ ಎಂದರು.

ಇದನ್ನು ಕೇಳಿ ಸುಬ್ಬರಾಯನು ‘‘ಅವಧಾನಿಗಳೇ, ನೀವು ಹೇಳಿದ್ದೆಲ್ಲಾ ನಿಜವೇನೇ! ಇರಲಿ ನನ್ನ ಮಾತಿಗೆ ಹೇಳುವುದಿಲ್ಲ! ಸುಮ್ಮನೆ ಮಾತಿಗೆ ಕೇಳುತ್ತೇನೆ. ನೀವು ನಿಮಿಷಕ್ಕೊಂದು ಬಾರಿ ದಕ್ಷಿಣೆ ಕೇಳುತ್ತೀರಲ್ಲ, ನ್ಯಾಯವೇ? ಹಾಗೆ ಕೇಳಲೇಬೇಕೆಂದು ಶಾಸ್ತ್ರದಲ್ಲಿದೆಯೋ? ನೀವು ಕೇಳುವುದು ಅನ್ಯಾಯವಲ್ಲವೇ? ಪಾಪವಲ್ಲವೇ? ನೀವೇ ಹೇಳಿರಿ’’ ಎಂದನು.

ಅವಧಾನಿಗಳು ಹೇಳಿದರು, ‘‘ಅಪ್ಪಾ, ಶಾಸ್ತ್ರಕ್ಕೂ, ಲೌಕಿಕಾಚಾರಕ್ಕೂ ಬಹುದೂರ! ಶಾಸ್ತ್ರವು ಹೇಳುತ್ತದೆ ‘‘ಐಶ್ವರ್ಯವಂತನು ಸಾಲಂಕೃತ ಕನ್ಯಾದಾನ ಮಾಡಬೇಕು! ಬಡ ಬ್ರಾಹ್ಮಣರಿಗೆ ಭೂರಿದಕ್ಷಿಣೆಗಳನ್ನೂ, ದಾನ ಧರ್ಮಗಳನ್ನೂ ಮಾಡಬೇಕು! ಎಲ್ಲರಿಗೂ ಮೃಷ್ಟಾನ್ನ ಭೋಜನ ಮಾಡಿಸ

ಬೇಕು ! ಆದರೆ ಏನೂಯಿಲ್ಲದ ಬಡವನು, ಬರಿಯ ತುಳಸೀ ದಳವನಿಟ್ಟು ಕನ್ಯಾದಾನ ಮಾಡಬೇಕು ! ಯಾರಿಗೂ ಅನ್ನವಸ್ತ್ರಾಗಲಿ, ಭೂದಕ್ಷಿಣೆಗಳ ನ್ನಾಗಲಿ ಕೊಟ್ಟೇ ತೀರಬೇಕೆಂಬ ಅಗತ್ಯವಿಲ್ಲ" ಎಂದು. ಆದರೆ, ಲೌಕಿಕಾ ಚಾರವು ಹೇಳುತ್ತದೆ "ಐಶ್ವರ್ಯವಂತರು ಸಾಲಂಕೃತ ಅಳಿಯನಿಗೆ, ಸಾಲಂಕ ತ ಕನ್ಯಾದಾನವನ್ನು ಮಾಡಬಹುದು. ಅದಕ್ಕೆ ತಕ್ಕಂತೆ ವಾದ್ಯಗಳು, ದೀಪ ಗಳು, ಮೆರವಣಿಗೆಯ ಸಮಾರಂಭಗಳು, ಬೀಗರ ಉಡುಗೆರೆಗಳು ಇವುಗಳಿಗೆ ಯಥೇಷ್ಟವಾಗಿ ಖರ್ಚು ಮಾಡಬೇಕು. ಹಾಗೆಯೆ ದೊಡ್ಡ ಮನುಷ್ಯರ ಒಂದುದಿನದ ಮೃಷ್ಟಾನ್ನ ಭೋಜನಕ್ಕೂ ಖರ್ಚು ಮಾಡಬಹುದು ಆದರೆ, ಯಾವ ಕೆಲಸಕ್ಕೂಬಾರದ ವೈದೀಕರ, ದಕ್ಷಿಣೆ ತಾಂಬೂಲಕ್ಕೂ, ಊಟಕ್ಕೂ ಸಾಧ್ಯವಾದಷ್ಟು ಕಡಿಮೆ ಖರ್ಚು ಮಾಡಬೇಕು !" ಹೀಗಿರುವಾಗೆ, ಶಾಸ್ತ್ರ ಕ್ಕೂ, ಲೌಕಿಕಾಚಾರಕ್ಕೂ ಯಾವ ಸಂಬಂಧ ? ಆದರೇನು ? ನಿಮಗೆ ಬೇಕಾ ದುದಕ್ಕೆ ಶಾಸ್ತ್ರ. ಬೇಡವಾದುದಕ್ಕೆ ಶಾಸ್ತ್ರವಿಲ್ಲ ! ನಮಗೆ ಕಾಸುಗಟ್ಟಲೆ ಕೊಡವುದಕ್ಕೆ ಶಾಸ್ತ್ರ ! ಹೊರಗೆ ಅನ್ಯಾಯವಾಗಿ ರೂಪಾಯಿಗಟ್ಟಲೆ ಖರ್ಚುಮಾಡುವುದಕ್ಕೆ ಶಾಸ್ತ್ರವಿಲ್ಲ; ಇರಲಿ, ಮತ್ತೊಂದು ವಿಷಯ ! ಹೇಳು ತ್ತೇನೆ ಕೇಳು ! ನಾವೋ ಬಡವರು ಸಂಸಾರವೂ ಹೆಚ್ಚು, ಕಾಸಿನ ತೊಂದ ರೆಯೂ ಹೆಚ್ಚು ದಿನಗಟ್ಟಲೆಯಲ್ಲಿ ನಮ್ಮನ್ನು ಮಾತನಾಡಿಸುವರೆ ಇಲ್ಲ ! ಮದುವೆ ಮುಂಜಿಗಳ ಕಾಲದಲ್ಲಿ ಯಾದರೂ ಆಗಲಿ, ಕೈತುಂಬಾ ಮರ್ಯಾದೆ ಯನ್ನಾದರೂ ಮಾಡಿದರೆ, ಹೋಗಲಿ ಮಧ್ಯೆ ಮಧ್ಯೆ ದುಡ್ಡು ಕೇಳದೆ ಇರಬ ಹುದು ! ಅದಕ್ಕೂ ನೀವು ಅವಕಾಶ ಕೊಡುವವರಲ್ಲ ! ನಾವು ಏನೂ ಕೇ ಳದೆ ಸುಮ್ಮನೆ ಮಾಡಿಸಿಬಿಟ್ಟರೂ, ನಿಮಗೆ ಸಂತೋಷವೇನೇ ಹಾಗೂ ನಿಮ ಗೇನೆ ಮರ್ಯಾದೆ ಮಾಡಬೇಕೆಂದು ತೋರಿದರೆ ಒಂದು ರೂಪಾಯಿಗಳ ಮೊದ ಲುಗೊಂಡು ಐದು ರೂಪಾಯಿಗಳೇ ಪರಮಾವಧಿ ಸಂಭಾವನೆ ! ಈ ರೀತಿ ಯಾದ ನಿಮ್ಮ ಸಂಭಾವನೆಯಿಂದ, ನಮ್ಮ ಭಂಗವು ಹೇಗೆ ನೀಗಬೇಕು ? ನಮ್ಮ ಹೊಟ್ಟೆಯು ಹೇಗೆ ತುಂಬಬೇಕು ? ಅದೂ ಇರಲಿ ನಮಗೆ ಐದು ದಿನಗಳಿಗೆ, ಐದು ರೂಪಾಯಿ ಸಂಭಾವನೆಯಾದರೆ, ಅದೇ ಓಲಗದವರಿಗೆ,

ಬಹಳ ಕಡಮೆಯೆಂದರೆ ಐವತ್ತು ರೂಪಾಯಿಗಳು ! ಹಾಗಾದರೆ ನಾವು ಅಥವಾ ನಮ್ಮ ಪೌರೋಹಿತ್ಯವು, ಆ ಓಲಗದವರಿಗಿಂತ ಕಡಮೆಯೇ ? ಅಲ್ಲ ! ಹಾಗಲ್ಲ ! ಆಡಂಬರಕ್ಕೆ ವಾದ್ಯವು ಬೇಕು, ನಂಬಿಕೆಯಿಲ್ಲದಿರುವುದರಿಂದ ಈ ಪುರೋಹಿತರು ಬೇಡ, ಏನೋ ಜನಗಳ ದೂರಿನ ಮಾತನ್ನು ಕೇಳಬಾರದೆಂದು, ವೈದೀಕರನ್ನು ಕರೆಸಿ ಬಿಡುವುದು. ಇನ್ನೊಂದು ಮಾತು, ಅಪ್ಪಾ ? ಪ್ರತಿಯೊಬ್ಬರೂ ಅವರವರ ವಿದ್ಯವನ್ನು ಕಲಿಯಲು, ಅವರವರಿಗೆ ಕಷ್ಟವೇ ಅಷ್ಟೆ ! ನಾವೂ ಸಹ ಹತ್ತಾರು ವರ್ಷ ಸಾಹಿತ್ಯವನ್ನು ಓದಿ, ಅಧ್ಯಯನವನ್ನು ಕಲಿತು, ಧರ್ಮ ಶಾಸ್ತ್ರಗಳನ್ನು ತಿಳಿದು ಕೊಳ್ಳಬೇಕಲ್ಲ ! ನಮಗೆ ಕಷ್ಟವಿಲ್ಲವೇ ? ಇಷ್ಟೆಲ್ಲ ಕಷ್ಟಪಟ್ಟು, ಸಕಾಲಕ್ಕೆ ನಿಮ್ಮ ಮನೆಗೆ ಬಂದು, ಐದು ದಿನಗಳೂ ಕೆಲಸ ಮಾಡಿದ್ದಕ್ಕೆ, ಪ್ರತಿಫಲ ಐದು ರೂಪಾಯಿಗಳೇ ? ಅದೂ ಹೋಗಲಿ, ಅದೇನು ? ನೀವು ತಾನೇ ಇತರ ಖರ್ಚುಗಳಿಗೆಲ್ಲ ಸಾವಿರಗಟ್ಟಲೆ ಖರ್ಚು ಮಾಡುವಿರಲ್ಲ ! ಅದೇ ನಿಮ್ಮ ಕರ್ಮಕ್ಕೆ ತಳಹದಿ ಪ್ರಾಯರಾದ ಪುರೋಹಿತರಿಗೆ ಮಾತ್ರ, ಕೈಯೆತ್ತಿ ಇಪ್ಪತ್ತು ಮೂವತ್ತು ರೂಪಾಯಿಗಳನ್ನು ಏಕೆ ಕೊಡಬಾರದು ? ಹಾಗೆ ನೀವು ಧಾರಾಳವಾಗಿ ಕೊಡುತ್ತಿದ್ದರೆ ನಾವೂ ಹೀಗೆ ಮಧ್ಯೆ ಮಧ್ಯೆ ಕೇಳುವುದಕ್ಕೆ ಆಗುತ್ತಲೂ ಇರಲಿಲ್ಲ ! ಕೇಳುತ್ತಲೂ ಯಿರಲಿಲ್ಲ ! ಇದಕ್ಕೆ ಮೇಲೆ ಪುಣ್ಯ ಪಾಪಗಳ ವಿಷಯ, ನಮ್ಮಲ್ಲಿ ನ್ಯಾಯಕ್ಕೆ ನ್ಯಾಯವೇ ಅನ್ಯಾಯಕ್ಕೆ ಅನ್ಯಾಯವೇ ! ನೀವು ಹೇಗೂ ಧರ್ಮವಾಗಿ ಮರ್ಯಾದೆ ಮಾಡುವುದಿಲ್ಲ ! ಆದುದರಿಂದ ನಾವೂ ಕೇಳದೇ ಯಿರುವುದಿಲ್ಲ ! ನೀವು ನಮಗೆ ಅಸಮಾಧಾನವಾಗುವಂತೆ ಮರ್ಯಾದಿಸುತ್ತೀರಿ. ನಾವೂ ನಿಮಗೆ ಅಸಮಾಧಾನವಾಗುವಂತೆ ಮಧ್ಯೆ ಮಧ್ಯೆ ದುಡ್ಡು ಕೇಳುತ್ತೇವೆ ! ನಿಮ್ಮ ಅಧರ್ಮಕ್ಕೂ ನಮ್ಮ ಅಧರ್ಮಕ್ಕೂ ಗಂಟು. ನಿಮಗೆ ಪಾಪವಾದರೆ ನಮಗೂ ಪಾಪ ! ನಿಮಗೆ ಪುಣ್ಯವಾದರೆ ನಮಗೂ ಪುಣ್ಯ ! ಆದರೆ ಒಂದು ಮಾತು, ಬಡವರ ಗತಿ ಏನೆಂದು ? ನಮಗೆ ಗೊತ್ತು ! ಬಡವರೂ ನಾವೂ ಒಂದೇ ಎಂದು. ಆದರೆ ಬಡವರು ನಿಮ್ಮ ಹಾಗೆ ತಾಳಕ್ಕೂ ಮೇಳಕ್ಕೂ ಹೆಚ್ಚು ದುಡ್ಡು ಹಾಕಿ,

ಉಳಿದವುಗಳಿಗೆ ಸೊನ್ನೆ ಹಾಕುವುದಿಲ್ಲ. ತಮ್ಮ ಶಕ್ತಿಮೀರಿ ವೈದೀಕರನ್ನು ಕರೆಸಿ ಮರ್ಯಾದಿಸುತ್ತಾರೆ. ನಮಗೆ ಅಷ್ಟೇಸಾಕು ! ಪಾಪ ! ಅವರೆಲ್ಲಿಂದ ತಂದಾರು ! ಇನ್ನೊಂದು ಮಾತು ಕೇಳ ಬಹುದು "ನೀನು, ಮೊದಲೇ ಇಷ್ಟೆಂದು ನಿಷ್ಕರ್ಷೆಮಾಡಿಕೊಂಡು, ಪೌರೋಹಿತ್ಯ ಮಾಡಿಸಿರಿ ಹೊಂದದೇ ಯಿದ್ದರೆ, ಬಿಟ್ಟು ಬಿಡಿರಿ" ಎಂದು, ನಿಜವೇ, ನೀನು ಹೇಳುವಂತಾದರೆ, ಬಹಳ ಅನುಕೂಲವೇ ! ನಾವೂ ಬದುಕಿ ಕೊಳ್ಳುತ್ತೇವೆ ! ಆದರೆ ಇದೇನೂ ( ಕಂಟ್ರಾಕ್ಟಲ್ಲ ) ಗುತ್ತಿಗೆ ಕರಾರಿನದಲ್ಲ ! ಎರಡನೆಯದಾಗಿ, ಅದರಿಂದ ನಿಮಗೆ ಆದಾಯವೇನೂ ಕಾಣಲಿಲ್ಲ ! ಪರಸ್ಪರ ಈಗಿನಷ್ಟು ಮರ್ಯಾದೆಯೂ ಯಿರುವುದಿಲ್ಲ ! ಯಜಮಾನ ಕೂಲಿಯವನಂತಾಗುತ್ತದೆ.

ಮತ್ತೊಂದು ಮಾತು ಇನ್ನು ನೀವು ನಿಮ್ಮ ಗುಂಪಿನಲ್ಲಿ, ನಿಮ್ಮ ಭಾಷೆಯ ಮಾತಿನಲ್ಲಿ, ( In English ) 'ಈ ವೈದಿಕರೆಲ್ಲ ಶುದ್ಧ ಕಳ್ಳರು ಸುಲಿಗೇ ಮಾಡಿಬಿಡುತ್ತಾರೆ, ಇದಕ್ಕೆ ಅದಕ್ಕೆಂದು ಕೇಳುತ್ತಲೇಯಿರುತ್ತಾರೆ. ಸ್ವಲ್ಪವಾಗಲಿ ದಯೆದಾಕ್ಷಿಣ್ಯವೆಂಬುವುದು ಇಲ್ಲವೇಯಿಲ್ಲ ! ಅವರನ್ನು ಬಿಟ್ಟರೆ ನಮಗೆ ಗತಿಯಿಲ್ಲ ಏನುಮಾಡುವುದು, ಯತ್ನವಿಲ್ಲ' ! ಎಂದು ಮಾತನಾಡಿ ಕೊಳ್ಳುತ್ತೀರಿ ! ಅದೂ ಆಯಾವೇಳೆಗಳಲ್ಲಿ ಮಾತ್ರ ! ಆದರೆ ಅದೇ ನಮ್ಮ ಗುಂಪಿನಲ್ಲಿ ನೋಡಬೇಕು ? ನೀವಾಡಿಕೊಳ್ಳುವುದು ಎಷ್ಟೋಪಾಲುವಾಸಿ ! ಒಬ್ಬೊಬ್ಬರ ವರ್ಣನೆಯನ್ನೂ ಮಾಡುತ್ತೇವೆ ! ಬಾಕಿ ವಿಷಯದಲ್ಲಿರುವ ನಿಮ್ಮ ದುಂಡುಗಾರಿಕೆಯನ್ನೂ, ನಮಗೆ ಕೊಡುವಾಗ ಮಾತ್ರ ನೀವು ಮಾಡುವಲೋಭತನವನ್ನೂ. ಇದಕ್ಕೆ ಮೇಲೆ ನೀವಾಡಿಕೊಳ್ಳುವ ( ನಮ್ಮ ವಿಷಯದಲ್ಲಿ ) ಮಾತುಗಳನ್ನೂ. ಒಬ್ಬೊಬ್ಬರೂ ತಮ್ಮ ತಮ್ಮ ಅನುಭವಗಳಂತೆ ಹೇಳಿಕೊಂಡು ನಗುತ್ತೇವೆ ! ಹಾಸ್ಯ ಮಾಡುತ್ತೇವೆ ಚಪ್ಪಾಳೆ ತಟ್ಟುತ್ತೇವೆ! ಒಬ್ಬರ ಬೆನ್ನನ್ನು ಒಬ್ಬರು ತಟ್ಟುತ್ತೇವೆ! ಇಲ್ಲಿ ನೋಡು ಅದನ್ನೇ ಹೆಚ್ಚೆಂದು ಹೇಳುತ್ತೀರಿ, ಇದನ್ನು ಕೇಳಿದರೆ ಇನ್ನೆಷ್ಟು ನಗುತ್ತೀರೋ ಎನ್ನುವುದು ಹೀಗೆಯೆ ವರ್ಣಿಸಿ ವರ್ಣಿಸಿ ನಿಮ್ಮನ್ನು ಆಡಿಕೊಳ್ಳುತ್ತೇವೆ. ಆದರೆ ಕೊನೆಯ

ದಾಗಿ ನೀನೊಂದು ಮಾತನ್ನು ಕೇಳ ಬಹುದು ! "ಇಷ್ಟೆಲ್ಲ ಹೇಳುವಿರಲ್ಲ ! ಪೌರೋಹಿತ್ಯವೇ ಬೇಡವೆಂದರೂ ? ಆಗೇನು ಮಾಡುವರಿ" ! ಎಂದು, ನಿಜ ಆಗ ನಮಗೂ ನಿರಾಳ, ಇದರ ಆಸೆಯೂಯಿಲ್ಲ! ನಿಮ್ಮ ಹಂಗೂಯಿಲ್ಲ, ನಿಮ್ಮನ್ನು ಇಣಿಕಿಯೂ ನೋಡುವಂತಿಲ್ಲ ಗೊತ್ತೇಯಿದೆ ! ಇರಲಿ ಇದರಲಿ ಇನ್ನೊಂದು ಗುಟ್ಟು ! ನಾವು ನಿಮ್ಮನ್ನು ಆಗಾಗ್ಯೆ ದುಡ್ಡನ್ನು ಕೇಳುತ್ತೇವೆಂಬುದು ನಿಜ ! ಕೇಳಿದರೇನು ? ಹೊರಗಡೆ ನಿಮಗೆ ನೋಡಲಿಕ್ಕೆ ಎಲ್ಲವೂ ಸರಿಯೆ! ಆದರೆ, ನಮ್ಮ ಮನಸ್ಸು ಮಾತ್ರ, ಅಯ್ಯೋ! ಈ ಮೂರುಕಾಸನ್ನು ಕೇಳಬೇಕಲ್ಲ ! ಹಾಳುದೈನ್ಯವೇ ! ಬಿಟ್ಟರೆ ಗತಿಯಿಲ್ಲವಲ್ಲ ! ದೇವರೇ, ಎಂದೆಂದಿಗೂ ಈ ದೈನ್ಯಾವಸ್ಥೆಯು ವೈದಿಕ ವೃತ್ತಿಯನ್ನು ಮಾತ್ರ, ಎಂದೆಂದಿಗೂ, ಯಾರಿಗೂ ಯಾವಜನ್ಮಕ್ಕೂ, ಕೊಡಬೇಡ ವೆಂತಲೇ ಪ್ರಾರ್ಥಿಸುತ್ತಿರುತ್ತೇವೆ ಇನ್ನು ನಾವು ಮಾತ್ರ ನಿಸ್ಪೃಹರಾಗಿರುತ್ತಿದ್ದರೆ, ನೀವು ನಮ್ಮ ಮನೆಯ ಬಾಗಿಲನ್ನು ಕಾಯಬೇಕಾಗುತ್ತಿತ್ತು ! ನೂರಾರು ವಿಧವಾಗಿ ನಮ್ಮನ್ನು ಗೌರವಿಸ ಬೇಕಾಗುತ್ತಿತ್ತು ! ಭಯಪಡುತ್ತಿದ್ದಿರಿ ! ಇಷ್ಟು ಹೊತ್ತೂ, ನಾನೂ ನೀನೂ ಆಡಿದ ಮಾತು ಕತೆಗಳೊಂದಕ್ಕೂ ಅವಕಾಶವಿರುತ್ತಲೇ ಯಿಡಲಿಲ್ಲ ಆದುದರಿಂದ, ನಿನಗೇಕಪ್ಪ ಇಂತಹ ಪೌರೋಹಿತ್ಯ ಬೇಕು ? ಇದಕ್ಕೇಕೆ ಆಸೆಪಡುವೆ ? ಎಂದರು.

ಇದನ್ನು ಕೇಳಿ ಅಲ್ಲಿದ್ದವರೆಲ್ಲರೂ ಬೆಪ್ಪಾದರು................... ...... ..... ಆ ದಿನದ ಸಮಾರಾಧನೆ ಊಟ ಮೊದಲಾದವುಗಳೆಲ್ಲ ಆದವು. ಇನ್ನು ಮಾರನೆಯ ದಿನ ಮೊದಲು ಕಾಶಿಯಾತ್ರೆಯ ಮೆರವಣಿಗೆಯಾಗಬೇಕಾಗಿತ್ತು (ಕಾರಣಾಂತರದಿಂದ ವ್ರತ ಸಮಾರಾಧನೆಯ ದಿನವೇ ನಡೆಯಲವಕಾಶವಾಗಲಿಲ್ಲ) ಹೆಣ್ಣನವರ ಮನೆಯಿಂದ ಕಾಶೀ ಯಾತ್ರೆಗೆ ಸಂಬಂಧಪಟ್ಟ ಸಾಮಾನುಗಳೆಲ್ಲ ಬಂದಿದ್ದವು ವರನಿಗೆ ಮಾಡಬೇಕಾದ ಅಲಂಕಾರಗಳೆಲ್ಲವೂ ಆಯಿತು ತಲೆಗೆ ರುಮಾಲನ್ನು ಮಾತ್ರ ಸುತ್ತಿರಲಿಲ್ಲವಾದ್ದರಿಂದ, ರುಮಾಲನ್ನು ಹಾಕಿಕೊಳ್ಳಬೇಕೆಂದರು ಅಷ್ಟರಲ್ಲಿ ಒಬ್ಬರು "ಸರಿ ಅದಕ್ಕೇನು ಒಳಗೆ ಹೋಗಿ

ಒಂದು ರುಮಾಲನ್ನು ಸುತ್ತಿಕೊಂಡು ಬನ್ನಿರೆಂದರು.” ಆಗ ಗಂಡಿನ ಕಡೆಯುವ
ರಾದ ಮತ್ತೊಬ್ಬರು ‘ಅದಾಗದು, ಕಾಶಿಯಾತ್ರೆಯ ಸಾಮಾನುಗಳ ಜತೆ
ಯಲ್ಲಿ ಈಗಲೂ ಹೆಣ್ಣಿನವರ ಮನೆಯಿಂದಲೇ ಮತ್ತೊಂದು, ಹೊಸ ರುಮಾ
ಲು ಬರಬೇಕೆಂದರು. (ಈ ವೇಳೆಗಳಲ್ಲಿ ನೆಪವಿಲ್ಲದ ನೆಪದಿಂದ ಹೆಣ್ಣಿನವ
ರಿಂದ ಸಾಧ್ಯವಾದಷ್ಟನ್ನು ಸೆಳೆಯುವ ಪದ್ಧತಿ) ಆಗ ಶ್ರೀನಿವಾಸರಾಯರು
ಪುರೋಹಿತರನ್ನು ಕುರಿತು” ಏನ್ರಿ ಸುಬ್ಬಾವಧಾನಿಗಳೇ ‘ಈ ದಿನದ ಸಾಮಾ
ನುಗಳ ಪಟ್ಟಿಯಲ್ಲಿ ರುಮಾಲನ್ನೂ ಏಕೆ ಸೇರಿಸಿಬರೆಯಲಿಲ್ಲ’ ಎಂದರು ಅದಕ್ಕ
ವಧಾನಿಗಳು ಮೊನ್ನೆಯೆ ವರಪೂಜೆಯಲ್ಲಿ ಕೊಟ್ಟಿದ್ದಿತಾದ್ದರಿಂದ ಅದನ್ನ
ಪುನಃ ಸೇರಿಸಲಿಲ್ಲವೆಂದರು. ಅದಕ್ಕೆ ಶ್ರೀನಿವಾಸರಾಯರು “ಏನ್ರಿ ಹೀಗೆ
ನ್ನುವಿರಿ ಇವತ್ತೂ ಬೇರೆ ರುಮಾಲನ್ನು ತರುವ ಪದ್ಧತಿಯಂತಲ್ಲ! ಇವತ್ತಿ
ನವರೆಗೆ ನೀವು ಎಷ್ಟೋ ಮದುವೆಗಳನ್ನು ಮಾಡಿಸಿರುವಿರಿ! ಹೀಗಿದ್ದೂ
ನೀವು ತರಬೇಕಾದ ಪದಾರ್ಥಗಳನ್ನು ತರಹೇಳದೆ ಸುಮ್ಮನೆ ಇಲ್ಲದ ಸಲ್ಲದ
ಸಾವಕಾಶಕ್ಕೊ ತೊಂದರೆಗೂ ಏಕೆ ಅವಕಾಶಕೊಟ್ಟಿರಿ?” ಎಂದರು.
ಅದಕ್ಕಂದರು ಅವಧಾನಿಗಳು ಸ್ವಾಮಿ “ಒಬ್ಬೊಬ್ಬರಲ್ಲಿ ಒಂದೊಂದು ಪದ
ತಿಯಿರಬಹುದು ಇವೆಲ್ಲಾ ಲೌಕಿಕಾಚಾರ! ಶಾಸ್ತ್ರದ ವಿಷಯವಲ್ಲ ಶಾಸ
ವಿಷಯವಾದರೆ ನನಗೆ ನಿಷ್ಕರ್ಷೆಯಾದ ಅನುಭವವುಂಟು. ಆದರೆ, ಈ
ಲೌಕಿಕಾಚಾರದಂತೆಯೂ ನಾನು ಈವರೆಗೂ ನೋಡಿರುವಂತೆ, ಎರಡನೇ
ರುಮಾಲನ್ನು ತರುವ ಪದ್ಧತಿಯಿಲ್ಲ. ಈಗ ತಾನೇ ಏನು, ಬೇಗನೆ ತರಿಸಿ
ಬಿಟ್ಟರಾಯಿತು! ‘ಅಧಿಕಸ್ಯ ಅಧಿಕಂಫಲಂ’ ಅಡ್ಡಿಯೇನು?” ಎಂ
ದರು. ಇಷ್ಟನ್ನುತ್ತಲೇ ರಾಯರಿಗೆ ರೇಗಿತು “ಏನಯ್ಯ ತಲೆಯಲ್ಲ ಹರಟು
ತ್ತೀರಿ! ಮಾತಿಗೆ ಮಾತು ಜೋಡಿಸುತ್ತೀರಿ ಇಷ್ಟವಿದ್ದರೆ ಸರಿಯಾಗಿ ಮಾಡಿ
ಸಬೇಕು ಇಲ್ಲವಾದರೆ ಹೊರಟುಹೋಗಬೇಕು ಬೇರೆ ಯಾರೂ ಗತಿಯಿಲ್ಲ
ವೆಂದು ತಿಳಿದಿರುವಿರೋ” ಎಂದು ಹೇಳಿ ತಮ್ಮ ಮಗನನ್ನು ಕರೆದು ಹೊಸ
ರುಮಾಲನ್ನು ತರಹೇಳಿದರು.

ಇದನ್ನು ಕೇಳಿ ಅವಧಾನಿಗಳಿಗೂ ರೇಗಿತು, ಎಂತಹವನಿಗೂ ಸ್ವಾಭಿಮಾನವೆಂಬುವುದು ( Self respect ) ಸಮಯದಲ್ಲಿ ಎದ್ದೇಳುವುದು. ಇಲ್ಲದಿದ್ದರೆ, ಅವನು ಹೇಡಿಯೋ ನಪುಂಸಕನೊ ಆಗಿರಬೇಕು, ಅವಧಾನಿಗಳು ಮನಸ್ಸಿನಲ್ಲಿ "ನಾನು ಯಾವ ಅಪರಾಧವನ್ನು ಮಾಡಿದ್ದಕ್ಕೆ ಇಷ್ಟು ಜನಗಳ ಮಧ್ಯೆ ನನಗೆ ತಿರಸ್ಕಾರ!" ತಾವು ದೊಡ್ಡವರು, ಹಣವಂತರು, ಅಧಿಕಾರಸ್ಥರು, ನಾನು ಬಡವ, ಯಾವಯೋಗ್ಯತೆಯೂ ಯಿಲ್ಲದವನು ಒಂದು ಸಾರಿ ಕರೆದ ಮಾತ್ರಕ್ಕೆ, ಓಡಿಬರುವ ನಾಯಂತೆ, ಒಂದುಸಾರಿ ಇವರು ಕರೆಯುವುದನ್ನು ಕಾಯುತ್ತಿದ್ದು ಬರುವವನು, ಹೇಳಿದ್ದಕ್ಕೆಲ್ಲ ಹೌದು! ಹಾಗೆಯೇ ಎಂದು ಹಲ್ಲುಕಿಸಿಯುವುದು 'ಏನೋ, ಎಲ್ಲವೂ ತಮ್ಮಿಂದಲೇ ಆಗಬೇಕು ಎಂದು ಹೇಳುತ್ತಿರುವುದು' ಬೆಳಗಿನಿಂದ ಸಾಯಂಕಾಲದ ವರೆಗೂ, ರಾತ್ರಿ ನಿದ್ರೆ ಬಂದಿತೋಯಿಲ್ಲವೊ, ಸರಿಯಾಗಿ ಊಟವಾಯಿತೋ ಯಿಲ್ಲವೊ ಎಂಬುವುಗಳನ್ನು ನೋಡದೆ, ಇವರ ಮನೆಯಲ್ಲಿ ಬಂದು ಚಾಕರಿ ಮಾಡುವುದು ಇವುಗಳಿಂದಲ್ಲವೇ ಹೀಗಂಧದ್ದು! ಮತ್ತು 'ಇವರಿಗೆ ನಮ್ಮನ್ನು ಬಿಟ್ಟರೆ ಬೇರೆ ಗತಿಯಿಲ್ಲ, ಹೇಗೂ, ಹೋಗೆಂದರೂ,' 'ಮಹಾಪರಾಧವಾಯಿತು ಕ್ಷಮಿಸಿರಿ ಎಂದು ಹೇಳಿ ಕಾಲಿಗೆ ಬಿದ್ದೇ ಬೀಳುವರು, ಆದುದರಿಂದ ನಾವೆಷ್ಟು ನಿಷ್ಠುರ ಹೇಳಿದರೂ ಅವಮಾನ ಮಾಡಿದರೂ ನಮಗೆ ಭಯವೇನೂಯಿಲ್ಲ ಎಂಬ ಗರ್ವದಿಂದಲ್ಲವೇ ಇವರು ಹೀಗೆ ಹೇಳಿದುದು ? ಆಗಲಿ, ನಾನೂ ನೋಡಿ ಬಿಡುತ್ತೇನೆ! ಇವರ ಮನೆಯ ಪೌರೋಹಿತ್ಯವಿಲ್ಲದಿದ್ದರೆ, ನನಗೆ ಜೀವನವಾಗುವುದೋ ಯಿಲ್ಲವೊ? ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ: ಅಲ್ಲದೇ ಈ ಲೋಕದಲ್ಲಿ ಜೀವಿಸುತ್ತಿರುವ ಎಲ್ಲಾ ಬಡವರಿಗೂ ಈ ಪೌರೋಹಿತ್ಯವೇ ಯಿರುವುದೇ' ! ಎಂದು ಯೋಚಿಸಿ, ಯಾವ ಅಸಮಾಧಾನವನ್ನೂ ತೋರ್ಪಡಿಸಿ ಕೊಳ್ಳದೆ ಸರಿ, ಬಂದು ಬಿಟ್ಟೆನೆಂದು ಹೇಳಿ, ಅಲ್ಲಿ ಇಲ್ಲಿ ಹೋದಂತೆ ಮಾಡಿ, ನೆಟ್ಟಗೆ ತಮ್ಮ ಮನೆಗೆ, ಹೇಳದೇ ಕೇಳದೆ ಬಂದೇ ಬಿಟ್ಟರು.

ಈ ಕಡೆಯಲ್ಲಿ, ರಾಯರ ಮಗನು, ರುಮಾಲನ್ನು ತಂದು ಅಳಿಯನ ತಲೆಗೆ ಸುತ್ತಿದನು. ಆ ಮೇಲೆ 'ಪುರೋಹಿತರೇ, ಎಲ್ಲವೂ ಸಿದ್ಧವಾಯಿತು, ಹೊರಡಬಹುದೆಂದರು' ಪುರೋಹಿತರುಬರಲಲ್ಲ 'ಹಿತ್ತಿಲಿನಲ್ಲಿರಬಹುದು ಬೇಗ ಬರಹೇಳಿರೆಂದರು' ನೋಡಿದರು ! ಹುಡುಕಿದರು ! ಪುರೋಹಿತರ ಸುಳಿವೇ ಯಿಲ್ಲ ! ಆಗ ಎಲ್ಲರಿಗೂ ಸ್ವಲ್ಪದಿಗಿಲಾಯಿತು. ಎಲ್ಲರೂ ಆಗ ಕಣ್ಣು ತೆರೆದರು 'ರಾಯರ ನಿಷ್ಠುರವಾದ ಮಾತಿನಿಂದಲೇ ಪುರೋಹಿತರು ಕೈ ಕೊಟ್ಟರೆಂದು' ಎಲ್ಲರಿಗೂ ಸ್ಪಷ್ಟವಾಗಿ ತಿಳಿಯಿತು. ಆದರೂ ಯಾರೂ ಬಾಯಿಬಿಡಲಿಲ್ಲ ! ಶ್ರೀನಿವಾಸರಾಯರಿಗೂ ಹಾಗೆಯೆ ಹೊಳೆಯಿತು 'ಬೀಗರೆದುರಿಗೆ ಅವಮಾನ ವಾಯಿತಲ್ಲ' ಎಂದು ಯೋಚಿಸಿದರು, ಮನಸ್ಸಿನಲ್ಲಿಯೇ ಪುರೋಹಿತರ ಮೇಲೆ ಹಲ್ಲು ಹಲ್ಲು ಕಚ್ಚಿದರು, ಆದರೂ ಎಲ್ಲವನ್ನೂ ನುಂಗಿಕೊಂಡು, ಯಾವುದ ನ್ನೂ ತೋರ್ಪಡಿಸದೆ, ಮತ್ತೂ ಅಧಿಕಾರದ ಮಾತನ್ನೇ ಆಡಿದರು 'ಹೋದ ರೆ ಹೋಗಲಿ, ಅವರಂತಹ ಎಷ್ಟೋ ಕಂತೆಗಳು, ಎರಡುಕಾಸು ಹೆಚ್ಚಾಗಿ ಬಿಸಾಟರೆ, ನಾಮುಂದು ತಾಮುಂದೆಂದು ಸಿದ್ಧವಾಗುವರು. 'ಸುಬ್ಬರಾಯ ! ಹೋಗು, ವೆಂಕಟರಮಣ ಅವಧಾನಿಗಳನ್ನೂ ನಾನು ಹೇಳಿದೆನೆಂದು, ಈ ಕ್ಷಣ ಕರೆದುಕೊಂಡುಬಾ, ಅವರು ಸಿಕ್ಕದಿದ್ದರೆ, ನಂಜುಂಡಾವಧಾನಿಗಳನ್ನಾ ದರೂ ಕರೆದುಕೊಂಡು ಬಾ, ಮೋಟಾರನ್ನೇ ತೆಗಿಸಿಕೊಂಡು ಹೋಗು ! ಎರಡು ಶಾಲುಗಳನ್ನು ತೆಗೆದುಕೊಂಡು ಹೋಗಿ, ಮೋಟಾರಿನ ಆಸನದ ದಿಂಬಿನ ಮೇಲೆ ( Seat ) ಶಾಲುಹಾಸಿ, ಅವಧಾನಿಗಳನ್ನು ಮೋಟಾರಿ ನಲ್ಲಿಯೇ ಕೂರಿಸಿಕೊಂಡು ಬಾ' ಎಂದರು. ನಾನೂ ಅವನ ಹಿಂದೆಯೇ ಹೊರಟೆನು ಸುಬ್ಬರಾಯನು, ರಾಯರು ಹೇಳಿದಂತೆ, ಅವಧಾನಿಗಳಿಬ್ಬರನ್ನೂ ನೋಡಿದನು ಇಬ್ಬರೂ ಸಿಕ್ಕಲಿಲ್ಲ. ಅವರೆಲ್ಲರೂ ಅದೇ ದಿವಸ, ಬೇರೆ ಬೇರೆ ಮನೆಗಳ ಪೌರೋಹಿತ್ಯಕ್ಕೆ ಹೋಗಿಬಿಟ್ಟಿದ್ದರು. ಆದುದರಿಂದ ನಮ್ಮ ಸುಬ್ಬರಾಯನು, ಪೆಚ್ಚುಮುಖಹಾಕಿಕೊಂಡು, ಬೇಗನೆ ಮನೆಗೆ ಬಂದು, ರಾಯರಿಗೆ ಎಲ್ಲವನ್ನೂ ಹೇಳಿದನು.

ಇದನ್ನು ಕೇಳಿ ರಾಯರು, ತೀರ ಹಣ್ಣಾದರು ! ತುಂಬ ಅವಮಾನವಾಯಿತು ! ಅಧಿಕಾರದ ಪಿತ್ತವೆಲ್ಲಾ ಎಲ್ಲಿಯೋ ಮಾಯವಾಯಿತು. "ಹೋಗಿರಿ ! ಸಮಾಧಾನ ಮಾಡಿ ಸುಬ್ಬಾವಧಾನಿಗಳನ್ನೆ ಕರೆದುಕೊಂಡು ಬನ್ನಿರಿ ಮೋಟಾರನ್ನೇ ತೆಗೆದುಕೊಂಡು ಹೋಗಿರಿ" ಎಂದು ಮಧ್ಯಸ್ಥನಾದ ನನ್ನನ್ನೂ ಕಳುಹಿಸಿಕೊಟ್ಟರು. ನನಗೆ ನಗು ಬಂದಿತು ನನ್ನ ತಮ್ಮನ "**ಅದನ್ನೇ ಉಂಡೇನು-ಕದ ತೆಗಿ**" ಎಂಬುದು ಇಲ್ಲಿಯೂ ನಿದರ್ಶನಕ್ಕೆ ಬಂದಿತು.

ಆ ಕಡೆಯಲ್ಲಿ ಅವಧಾನಿಗಳು ಮನೆಗೆ ಬಂದರು. ಅವಧಾನಿಗಳ ಹೆಂಡತಿ ಅನ್ನಪೂರ್ಣಮ್ಮನವರು 'ಏನು ಆಗಲೇ ಇಷ್ಟು ಬೇಗ ಮದುವೆಯೆಲ್ಲಾ ಬೆಳೆಯಿತೇ ? ದಕ್ಷಿಣೆ ದುಡ್ಡೆಷ್ಟು ?' ಎಂದು ಕೇಳಿದರು. ಆಗ ಅವಧಾನಿಗಳು ನಡೆದ ಸಮಾಚಾರವೆಲ್ಲವನ್ನೂ ಹೇಳಲು, ಅನ್ನಪೂರ್ಣಮ್ಮರವರು, "ಆತುರಗಾರನಿಗೆ ಬುದ್ಧಿ ಮಟ್ಟು, ಬಡವನ ಸಿಟ್ಟು ದವಡೆಗೆ ಪೆಟ್ಟು" ಎಂಬ ಗಾದೆಗಳು ನಿಮ್ಮಲ್ಲಿ ಚನ್ನಾಗಿ ಅನ್ವಯಿಸುತ್ತವೆ. ಅವರಿಗೇನು ಕಡಿಮೆ ! ಎಷ್ಟು ಜನ ಅವರ ಮನೆಯ ಬಾಗಿಲಿಗೆ ಬರುವರು ? ಈಗ ನಿಮಗೆಲ್ಲವೇ ? ಬರುವ ಹತ್ತಾರು ರೂಪಾಯಿಗಳಿಗೆ ಸೊನ್ನೆ ಬಿದ್ದಿತು ! 'ಅಷ್ಟು ದಿನಗಳಿಂದಲೂ, ಇಂದು, ನಾಳೆ ಸೀರೆಯನ್ನು ತೆಗಿಯುತ್ತೇನೆಂದು,' ಕಾಲ ಕಳೆಯುತ್ತಿದ್ದಿರಿ ! ಏನೋ ಈಗ ರಾಯರ ಮನೆಯ ಮದುವೆಯ ದೆಸೆಯಿಂದ, ನನ್ನ ಸೀರೆಗೆ ದುಡ್ಡು ಒದಗಬಹುದೆಂದುಕೊಂಡಿದ್ದೆ ! ಈಗ ಆಸಕ್ಕೆ ಚಕ್ಕರ ಬಿದ್ದಿತು ! ಸಾಲದ್ದಕ್ಕೆ ಮಕ್ಕಳಿಗೊಂದಕ್ಕೂ ಬಟ್ಟೆಯಿಲ್ಲ ! ಎಷ್ಟಾದರು ದೊಡ್ಡವರು ! ಅಂದರೆ ಅಂದುಕೊಳ್ಳಲಿ, ನಮ್ಮ ಕೈಯಿಂದ ಹೋಗುವ ಗಂಟೇನು ? ನೀವು ಸ್ವಲ್ಪ ಸಹಿಸಿಕೊಂಡಿದ್ದರೆ ಸ್ವಲ್ಪ ಹೊತ್ತಿನಲ್ಲಿಯೇ ನಿಮ್ಮ ಶಾಂತತೆಯನ್ನು ನೋಡಿ, ಅವರಿಗೆ ಪಶ್ಚಾ

ತ್ತಾಪ ಹುಟ್ಟಿ, ಕೊನೆಗೆ ನಿಮ್ಮ ಕ್ಷಮೆ ಬೇಡಲು ಸಾಕಾಗಿತ್ತು! ಲೋಕ ದಲ್ಲಿ ಎಲ್ಲಾ ಕಡೆಯಲ್ಲಿಯೂ ದುಡ್ಡು ಕೊಡುವವನಿಗೆ, ದುಡ್ಡು ತೆಗೆದು ಕೊಳ್ಳುವವನು ಅಡಿಯಾಳು! ಎಂತಹವನಾದರೂ ಸರಿಯೇ ಅನ್ನಿಸಿಕೊ ಳ್ಳಲೇಬೇಕು. ಇದು ಮೇಲಿನಿಂದ ಕೆಳಗಿನವರೆಗೂ, ಎಲ್ಲಿಯೂ, ಯಾರಿಗೂ ತಪ್ಪಿದುದಲ್ಲ. ಇದು ಎಲ್ಲರಿಗೂ ಸಮಾನ. ಈಗ ನೋಡಿ ನಿಮಗೆ ಉಭಯ ಭ್ರಷ್ಟತ್ವ! ಗೊತ್ತಾಗಿದ್ದ ಮನೆಯನ್ನು ಬಿಟ್ಟಿರಿ! ಇತರರ ಮನೆ ಗಳಲ್ಲಿ ಬೇರೆಯವರು ನಿಷ್ಕರ್ಷೆಯಾಗಿಬಿಟ್ಟಿರುವರು! ಇದೂ ಇಲ್ಲ, ಅದೂ ಯಿಲ್ಲವಾಯಿತು. ಬರುವ ಹತ್ತಾರು ರೂಪಾಯಿಗಳೂ ಹೋಯಿತು! ಕೈ ಯಿಂದ ಹತ್ತಾರು ರೂಪಾಯಿಗಳನ್ನು ತೆತ್ತು ಜವಳಿ ತೆಗೆಯಬೇಕಾಯಿತು! ಎಷ್ಟು ಕಷ್ಟ! ಎಷ್ಟು ನಷ್ಟ! ಇಷ್ಟೂ ಏತರಿಂದ? ಸ್ವಲ್ಪ ತಾಳ್ಮೆಯಿಲ್ಲ ದಿದ್ದುದರಿಂದ ತಾನೆ? ಒಂದು ವೇಳೆ ನಮಗೆ ಬೇಕಾದಷ್ಟಿದ್ದಿದ್ದರೆ, ಹೋಗಲಿ! ಅವರ ಮಾತನ್ನು ಕೇಳಬೇಕಾದ ಅಗತ್ಯವಿರಲಿಲ್ಲ, ಹೋಗಲಿ! ಈಗಲಾದರೂ ನಾವು, ಕಷ್ಟವೋ ನಷ್ಟವೋ ಸುಖವೋ ದುಃಖವೋ ಮಾ ನವೋ ಅವಮಾನವೊ— ಹೇಗೊ, ಸಂಪಾದಿಸಿ, ಸ್ವಲ್ಪ ಮಟ್ಟಿಗಾದರೂ ಕೂಡಿಟ್ಟುಕೊಂಡರೆಂದೇವೆಂದರೆ, ಮುಂದೆ ವಯಸ್ಸಾದ ಮೇಲಾದರೂ ಸು ಖವಾಗಿರಬಹುದು. ಅವರ ಹಂಗೇ ಬೇಡ! ಗೌರವವಾಗಿ ಕಂಡರೆ ಹೋ ಗೋಣ, ಇಲ್ಲದಿದ್ದರೆ, 'ನಿಮ್ಮ ತಲೆಪಾಡು' ಎಂದು ಸುಮ್ಮನಿದ್ದುಬಿಡ ಬಹುದು. ಈಗ ಅವಮಾನವಾದರೂ, ಮುಂದಾದರೂ ಸುಖವಾಗುವುದು. ಈಗಿನ ಅವಮಾನಕ್ಕೆ ಮನಸೋತರೆ, ಇಂದಿಗೂ, ಎಂದಿಗೂ, ನಮಗೆ ಮರ್ಯಾದೆಯೂ ಇಲ್ಲದೆ, ಸುಖವೂ ಇಲ್ಲದಂತಾಗುವುದು. ಆದುದರಿಂದ ಆದದ್ದಾಯಿತು! ಈಗಲಾದರೂ ಹೋಗಿರಿ, ಇದೊಂದನ್ನೂ ತಿಳಿಸಿಕೊಳ್ಳ ಬೇಡಿರಿ! ಏನೋ ದೇಹಬಾಧೆಗೆ (Calls of nature) ಹೋಗಬೇಕಾಗಿ

ತ್ತೆಂದೂ, ಆಮೇಲೆ ಮಡಿಯುಟ್ಟುಕೊಂಡು ಬರಲು ಹೊತ್ತಾಯಿತೆಂದು ಹೇಳಿ, 'ಸ್ವಲ್ಪ ತಡವಾದುದಕ್ಕೆ ಕ್ಷಮಿಸಬೇಕೆಂದು' ಕೇಳಿಬಿಡಿರಿ! ಮುಂದೆ ಎಲ್ಲವೂ, ಸರಿಹೋಗುವುದು' ಎಂದು ಹೇಳಿ ಮುಗಿಸುವುದಕ್ಕೂ, ನಾನು ಇವೆಲ್ಲವನ್ನೂ ಕಿವಿಯಿಂದ ಕೇಳುತ್ತಲೇ ಒಳಗೆ ಹೋಗುವುದಕ್ಕೂ ಸರಿಯಾಯಿತು. ಹೆಂಡತಿಯ ಮಾತಿಗೆ 'ಹಾಗೆಯೇ ಆಗಲೆಂದು' ಅವಧಾನಿಗಳು ಹೊರಡಲು ಹಿಂದಿರುಗಿದರು. ನನಗೂ ನಗು ಬಂದಿತು! ನನ್ನ ತಮ್ಮನ "**ಅದನ್ನೇ ಉಂಡೇನು, ಕದ-ತೆಗಿ**" ಎಂಬುದು ಇಲ್ಲಿಯೂ ನಿದರ್ಶನಕ್ಕೆ ಬಂದಿತು.

ಸರಿ! ಮುಂದಿನ ವಿಷಯವನ್ನು ನಾನು ಹೇಳಬೇಕಾಗಿಲ್ಲ! ನಾನು ಪುರೋಹಿತರನ್ನು ಮೋಟಾರಿನಲ್ಲಿಯೇ ಕರೆದುಕೊಂಡು ಹೋದೆ! ಅವರು ತಮ್ಮ ಪತ್ನಿಯ ಉಪದೇಶದಂತೆಯೆ ನಡೆದುಕೊಂಡರು. ರಾಯರು, ಅವಧಾನಿಗಳ ಪತ್ನಿಯ ಊಹೆಯಂತೆಯೇ ಮಾಡಿದರು. ಇನ್ನು ಮುಂದೆ ನಡೆದವುಗಳೆಲ್ಲ ನಿಮಗೆ ತಿಳಿದವುಗಳೇ! ಮದುವೆಯಲ್ಲವೂ ಕ್ರಮವಾಗಿ, ಸಾಂಗವಾಗಿ ಬೆಳೆಯಿತು! ಎಲ್ಲರೂ ಉಡುಗೆರೆಗಳ ಸಮೇತ ಅವರವರ ಮನೆಗಳಿಗೂ ಊರುಗಳಿಗೂ, ಮದವಣಿಗರನ್ನು ಆಶೀರ್ವದಿಸಿ, ಹೊರಟು ಹೋದರು. ನಾನು ಮಾತ್ರ ಅಲ್ಲಿಯೇ ರಂಗರಾಯರ ಜತೆಯಲ್ಲಿ, ಇನ್ನೂ ಹದಿನೈದು ದಿನಗಳವರೆಗೆ ಯಿದ್ದು, ಆಮೇಲೆ ಊರಿಗೆ ಬಂದೆನು.

## ೩ನೇ ಪ್ರಕರಣ.

ಮಾರ್ತಾಂಡರಾಯರೆಂಬುವರು ನಮ್ಮೂರಿನಲ್ಲಿ ಒಬ್ಬ ಪ್ರಸಿದ್ಧ ಅಡ್ವೋಕೇಟರು. (Advocate) ಚಿನ್ನದಂತಹ ಮನುಷ್ಯರು. ಅವರಿಗೆ ಸಿಟ್ಟೆನ್ನುವುದೇ ಇಲ್ಲವೆನ್ನಬೇಕು. ತಮ್ಮ ಮನೆಗೆ ಬಂದ ಕಕ್ಷಿಗಾರರ

ಲ್ಲಾಗಲಿ, ಇತರರಲ್ಲಾಗಲಿ, ಮೃದುವಾಗಿ ಮಾತನಾಡಿ, ತಮ್ಮ ಕೈಲಾದಷ್ಟು ಸಹಾಯವನ್ನು ಮಾಡುತ್ತಿದ್ದರು. ಇವರ ಜತೆಗೆ ಇವರು ವಾದಿಸುವುವರಲ್ಲಿ (Argument) ಸಮರ್ಥರೆಂದು ಹೆಸರು ಪಡೆದಿದ್ದರು. ಆದುದರಿಂದ, ಇವರಿಗೆ ತಿಂಗಳಿಗೆ, ಏನಿಲ್ಲವೆಂದರೂ 200-300 ರೂಪಾಯಿಗಳ ವರಮಾನವಿತ್ತು. ಒಳ್ಳೆಯ ಹೆಸರೂ ಇತ್ತು.

ಪಾರ್ವತಮ್ಮನವರು ಮಾರ್ತಾಂಡರಾಯರ ಹೆಂಡತಿ ! ಪತಿಗೆ ತಕ್ಕ ಪತ್ನಿ. ರಾಯರಿಗೆ ಅಕಸ್ಮಾತ್ತಾಗಿ ಅಮಾವಾಸ್ಯೆಗೊಂದು ದಿನವಾದರೂ ಸಿಟ್ಟು ಬರುವುದುಂಟು. ಆದರೆ ಪಾರ್ವತಮ್ಮನವರಿಗೆ ಸಿಟ್ಟೆಂದರೇನೆಂದೇ ಗೊತ್ತಿರಲಿಲ್ಲ ! ಯಾವಾಗಲೂ ಹುಸಿ ನಗೆಯ ಮುಖ ! ಎಲ್ಲರಲ್ಲಿಯೂ ಒಳ್ಳೆಯ ಮಾತು ! ಎಂತಹವರಿಗೂ ಅವರವರ ಯೋಗ್ಯತೆಗೆ ತಕ್ಕಂತಹ ಮರ್ಯಾದೆ ! ಯಾರಿಗೂ ಅನಾದರವಿರಲಿಲ್ಲ ! ಇಂತಹವರ ಮನೆಯಲ್ಲಿ ಭಾಗ್ಯ ಲಕ್ಷ್ಮಿಯು ಸ್ಥಿರವಾಗಿ ನೆಲಸದೆ, ಇನ್ನೆಲ್ಲಿಗೆ ತಾನೆ ಹೋದಾಳು ? ಪಾರ್ವತಮ್ಮನವರಿಗೆ ನಾಲ್ಕು ಜನ ಗಂಡು ಮಕ್ಕಳು, ನಾಲ್ಕು ಜನ ಹೆಣ್ಣು ಮಕ್ಕಳೂ ಯಿದ್ದರು. ಮೊದಮೊದಲು ಎಂದರೆ ಸಂಸಾರವನ್ನು ಆರಂಭಿಸಿದಾಗ, ತಾವೇ ಅಡಿಗೆಯ ಕೆಲಸ ಮೊದಲ್ಗೊಂಡು ಎಲ್ಲಾ ಮನೆಯ ಕೆಲಸಗಳನ್ನೂ ಮಾಡಿಕೊಳ್ಳುತ್ತಿದ್ದರು. ಬರಬರುತ್ತಾ ಸಂಸಾರವು ಹೆಚ್ಚಾಗಲು ಒಬ್ಬ ಹೆಣ್ಣಾಳನ್ನು ಸುತ್ತು ಮುತ್ತಲಿನ ಕೆಲಸಕ್ಕೂ, ಒಬ್ಬ ಅಡಿಗೆಯವನನ್ನು ಅಡಿಗೆಯ ಕೆಲಸಕ್ಕೂ ಇಟ್ಟುಕೊಂಡಿದ್ದರು. ಅಡಿಗೆಯವನ ಸ್ವಭಾವವು, ಇವರ ಸ್ವಭಾವಕ್ಕೆ ತೀರ ವಿರುದ್ಧವಾಗಿದ್ದುದರಿಂದ, ಅವನನ್ನು ಒಳ್ಳೆಯ ಮಾತಿನಲ್ಲೇ "ಬೇಡವೆಂದು" ಕಳುಹಿಸಿ ಬಿಟ್ಟರು.

ಕೃಷ್ಣರಾಯರು ನಮ್ಮೂರಿನ ಅಸಿಸ್ಟೆಂಟ್ ಕಮಿಷನರು ! ತಿಂಗಳಿಗೆ

300 ರೂಪಾಯಿಗಳ ಸಂಬಳವಿದ್ದಿತು. ಯಾವಾಗಲೂ ಹಸನ್ಮುಖಿಗಳು! ಗಟ್ಟಿಯಾಗಿ ಮಾತನಾಡಿದವರೇ ಅಲ್ಲ. ಎಂದೂ ಅಲ್ಪತನಕ್ಕೆ ಪ್ರವೇಶ ಮಾಡಿದವರಲ್ಲ. ಇವರು ಸರ್ಕೀಟು ಹೊರಟಾಗ ಅಡಿಗೆಯವನನ್ನು ಕರೆದು ಕೊಂಡೇ ಹೋಗುತ್ತಿದ್ದರು. ಹನುಮಂತರಾಯನೇ ಅವರ ಅಡಿಗೆಯವನು! ಸಾಕ್ಷಾತ್ ರಾಮದೂತನೆಂದೇ ಹೇಳಬೇಕು! ಯಜಮಾನರು ಒಂದು ಮಾಡೆಂದರೆ ಅವನು ಎರಡು ಮಾಡುತ್ತಿದ್ದ! ಅಂದರೆ ವಿಪರೀತಾರ್ಥಮಾಡಬೇಡಿರಿ! ಆರುಘಂಟೆಗೆ ಸ್ನಾನಕ್ಕೆ ಸಿದ್ಧವಾಗಿರ ಬೇಕೆಂದರೆ, ಐದುಘಂಟೆಗೇ ಸಿದ್ಧ ಮಾಡಿಡುತ್ತಿದ್ದ! ಹತ್ತುಘಂಟೆಗೆ ಅಡಿಗೆಯಾಗಬೇಕೆಂದರೆ ಒಂಭತ್ತುಘಂಟೆಗೇ ಅಡಿಗೆ ಮಾಡಿಡುತ್ತಿದ್ದ! ಆದುದರಿಂದ ರಾಯರಿಗೆ ಹನುಮಂತರಾಯನ ವಿಷಯದಲ್ಲಿ, ಮಗನ ಪ್ರೀತಿಯೇ ಇದ್ದಿತು. ಅವನಿಗೂ ಅವರಲ್ಲಿ ತಂದೆಯ ವಿಶ್ವಾಸವೇ ಯಿದ್ದಿತು.

ಕೃಷ್ಣರಾಯರಿಗೆ ಸರ್ಕೀಟೆಂದರೆ ಬಲುಇಷ್ಟ! ಸಂತೋಷದಿಂದ ಮನೆಯನ್ನು ಬಿಟ್ಟು ಹೊರಡುವರು, ಆದರೆ ಸರ್ಕಾರಿಕೆಲಸದಲ್ಲಿ ಅಷ್ಟು ಶ್ರದ್ಧೆಯಿಂದಾಗಲಿ, ಅಥವಾ ಪ್ರಜೆಗಳ ಕುಂದುಕೊರತೆಗಳನ್ನು ಸದಾ ವಿಚಾರಿಸುತ್ತಿರಬೇಕೆಂದಾಗಲಿ ಅಲ್ಲ! ಆದರೆ ಅದಿಲ್ಲವೇಯಿಲ್ಲವೆಂದಲ್ಲ! ಅವರಿಗೆ ಮನೆಗೆ ಬಂದರೆ ಬಹಳ ಬೇಸರವಾಗುತ್ತಿತ್ತು! ಮನಸ್ಸಮಾಧಾನವಿರುತ್ತಿರಲಿಲ್ಲ. ಕಾರಣವೇನಂದರೆ, ಮತ್ತೇನೂಯಿಲ್ಲ, ಅವರ ಹೆಂಡತಿಯ ಮಾತು ಸ್ವಲ್ಪ ಹೆಚ್ಚಿನ ಮೃದು. ಸ್ವಲ್ಪ ಹೆಚ್ಚು ಕಡಮೆ ಒಡಕುಮಡಕೆಗೆ ಕಲ್ಲು ಹಾಕಿ ಅಲ್ಲಾಡಿಸಿದಂತೆಯೇ ಆಗುತ್ತಿತ್ತು. ಅಷ್ಟೆ! ನಮ್ಮ ರಾಯರು, ಅಕಸ್ಮಾತ್-ಸ್ವಲ್ಪ ಎದುರಾಗಿ ಮಾತನಾಡಿಬಿಟ್ಟರೆ, ಅಂದು ಅವರಿಗೆ ಸಿಡಿಲು, ಮಿಂಚು, ಮೋಡ, ಮಳೆಗಳ ಹೊಡತವೇ! ಆದರೆ, ಇವರು ಮೌನವಾಗಿದ್ದುಬಿಟ್ಟು, ಮನೆಗೆ ತರಬೇಕಾದುದನ್ನೆಲ್ಲಾ ಸರಿಯಾಗಿ ತಂದು ಬಿಟ್ಟರೆ, ಇವರಿ

ಗೇನೂ ವಿಶೇಷ ತೊಂದರೆ ಯಿಲ್ಲವೆಂತಲೇ ಹೇಳಬೇಕು ! ಇರಲಿ, ಹಾಲು ಪೊಸರಿನವರು' ಹೆಣ್ಣಾಳು, ಗಂಡಾಳು, ಅಡಿಗೆಯುವರು, ಇತರರು ಯಾ ರಾದರೂ ಸರಿಯೇ ತಿಂಗಳಿಗೊಬ್ಬಿಬ್ಬರು ಬದಲಾಯಿಸುತ್ತಿರಬೇಕು. ! ಇಲ್ಲ ದಿದ್ದರೆ ಅವರಿಗೆ ಉಳಿಗಾಲವಿರಲಿಲ್ಲ ! ಇದೇ ಈ ಮಾರಾಯಳ ಪದ್ಧತಿ.

ನಮ್ಮ ಹನುಮಂತರಾಯನೂ ಕೂಡ, ಒಂದು ತಿಂಗಳಾದನಂತರ, ಬೇರೆ ಕಡೆಗೆ ಹೊರಡಲು, ಯೋಚಿಸಿದನು. ಆಗ ಅವನು ಸರ್ಕೀಟಿನ ಲ್ಲಿದ್ದ ರಾಯರ ಜತೆಯಲ್ಲಿದ್ದುದರಿಂದ, ರಾಯರನ್ನು ಕುರಿತು 'ಸ್ವಾಮಿ ! ಈ ಒಂದು ತಿಂಗಳಿಂದ, ಈ ಮನೆಯಲ್ಲಿ ನಾನು ಪಟ್ಟ ಕಷ್ಟವನ್ನೂ ಕೇಳಿದ ನಿಷ್ಠೂರಗಳನ್ನೂ ಹೇಳಲು ಸಾಧ್ಯವಿಲ್ಲ. ಸದಾ ಮುಳ್ಳಿನ ಮೇಲೆ ನಿಂತಿರುವವ ನಂತೆಯೇ ಇದ್ದು ತಿಂಗಳಾಗುವುದನ್ನೇ ನಿರೀಕ್ಷಿಸುತ್ತಿದ್ದೆನು. ಇನ್ನು ನನ್ನ ಸಂಬಳವನ್ನು ದಯವಿಟ್ಟು ಕೊಟ್ಟು ಬಿಟ್ಟರೆ, ನಾನು ಬೇರೆಯವರ ಮನೆಗೆ ಹೋಗುತ್ತೇನೆ' ಎಂದನು. ಅದನ್ನು ಕೇಳಿ, ಅವನ ಗುಣವೆಲ್ಲವೂ ಗೊತ್ತಿ ದ್ದುದರಿಂದ, ರಾಯರಿಗೆ ಬಲು ದುಃಖವಾಗಿ, ಅಪ್ಪಾ ! ನೀನು ಹೊರಟು ಹೋದರೆ, ನನಗೆ ಸರ್ಕೀಟಿನಲ್ಲಾಗಲಿ ಮನೆಯಲ್ಲಾಗಲಿ, ಸಕಾಲಕ್ಕೆ ಹೊ ಟ್ಟೆಗಿಲ್ಲದಂತಾಗುವುದು. ಆದುದರಿಂದ ನೀನು ನನಗೋಸ್ಕರ, ಎಲ್ಲವನ್ನೂ ಸಹಿಸಿಕೊಂಡಿರು. ಮನೆಯಲ್ಲಿನ ನಿನ್ನ ಕಷ್ಟಗಳೆಲ್ಲವೂ ನನಗೆ ಗೊತ್ತಿರು ವುದು ಯತ್ನವಿಲ್ಲ' ಎಂದರು.

ಹಾಗೂ ಮೂರು ತಿಂಗಳು ಕಳೆಯಿತು ! ಹನುಮಂತರಾಯನಿಗೆ ಅಲ್ಲಿರುವುದು ಕಷ್ಟವಾಗಿ, ಅವರ ಮನೆಯನ್ನು ಬಿಟ್ಟು, ಅಡ್ವೋಕೇಟ್ ಮಾರ್ತಾಂಡರಾಯರ ಮನೆಗೆ ಬಂದು ಸೇರಿದನು.

ಹನುಮಂತರಾಯನು ಅಡ್ವೋಕೇಟರ ಮನೆಗೆ ಬಂದು ವರ್ಷವಾ

ಗುತ್ತ ಬಂದಿತು. ಮನೆಯವರ ಮತ್ತು ಹನುಮಂತರಾಯನ ಗುಣಗಳು ಒಂದೇ ರೀತಿಯಾದುದರಿಂದ, ಯಾರಿಗೂ, ಎಂದೂ ಪರಸ್ಪರ ಅಸಮಾಧಾನವೇ ಆಗಲಿಲ್ಲವೆನ್ನಬೇಕು.

ಈ ದಿವಸ ಅಡ್ವೋಕೇಟರ ಮನೆಯಲ್ಲಿ, ಅವರ ವರ್ಷದ ಮಗನಿಗೆ ಹುಟ್ಟಿದ ಹಬ್ಬ! ಇನ್ನೂ ಕೆಲವರ ಜತೆಗೆ ನನ್ನನ್ನೂ ಊಟಕ್ಕೆ ಕರೆದಿದ್ದರು. ನಿತ್ಯವೂ ಹತ್ತು ಘಂಟೆಗೆ ಸರಿಯಾಗಿ ರಾಯರು ಊಟಕ್ಕೆ ಕೂರುವ ಪದ್ಧತಿ! ಇಂದು ಎಲ್ಲರೂ ಸೇರಬೇಕಾಗಿದ್ದುದರಿಂದ, ಊಟಕ್ಕೆ ಕೂರುವುದು ಹತ್ತೂವರೆ ಘಂಟೆಯಾಯಿತು. ಆದರೆ ಇದರ ಮಧ್ಯೆ ನಿಮಗೊಂದು ವಿಷಯವನ್ನು ಹೇಳಲು ಮರೆತುಹೋಯಿತು! ರಾಯರ ಮನೆಯಲ್ಲಿ ಒಂದು ಪದ್ಧತಿಯಿತ್ತು! 'ಅಡಿಗೆಯಾಗಲಿ ಆಗದಿರಲಿ, ಒಂಭತ್ತೂ ಮುಕ್ಕಾಲು ಘಂಟೆಗೆ ಸರಿಯಾಗಿ ಎಲ್ಲರಿಗೂ ಎಲೆಹಾಕಿ ನೀರು ಇಟ್ಟುಬಿಡುವುದು! ಯಜಮಾನರು ಬಂದು ಕುಳಿತೊಡನೆಯೆ ಬಡಿಸುವುದು. ಈ ದಿವಸವೂ ಹಾಗೆಯೇ ಆಗಿತ್ತು. ಅಡಿಗೆಯಾಯಿತೇ ಇಲ್ಲವೇ ಎಂಬ ವಿಚಾರವಿಲ್ಲದೆಯೇ ಎಲೆಗಳನ್ನು ಹಾಕಿ, ನೀರಿಟ್ಟು ಸಿದ್ಧಪಡಿಸಿದ್ದರು.

ಇದಕ್ಕೆ ಮೇಲೆ ಹತ್ತೂವರೆ ಘಂಟೆಯೂ ಆಗಿ ಹೋಗಿತ್ತು! ಆದುದರಿಂದ ರಾಯರು, 'ಅಡಿಗೆಯಾಯಿತೆ ಇಲ್ಲವೇ'ಯೆಂದು ವಿಚಾರಿಸದೆ, ಎಲೆಯ ಮುಂದೆ ಬಂದು (ಎಲ್ಲರ ಸಮೇತವಾಗಿ) ಕುಳಿತು, 'ಹನುಮಂತಪ ಬಡಿಸಪ್ಪ' ಎಂದರು.

ಅದನ್ನು ಕೇಳಿ ಹನುಮಂತಪ್ಪನು, 'ಇನ್ನೂ ಸ್ವಲ್ಪ ಮಾತ್ರ ಅಡಿಗೆಯಾಗಬೇಕು! ದಯವಿಟ್ಟು ಹತ್ತೇ ಹತ್ತು ನಿಮಿಷದ ಅವಕಾಶ ಕೊಡಬೇಕು' ಎಂದನು. ಅದನ್ನು ಕೇಳಿದೊಡನೆಯೆ ರಾಯರು ಕಿಡಿಕಿಡಿಯಾದರು. ಸ್ವಲ್ಪ ಇಂದಿನ ಗ್ರಹಚಾರವೂ ವಕ್ರವಾಗಿತ್ತು. 'ಏನಯ್ಯಾ! ನಿನಗೇನು ಜ್ಞಾನಗೀನವಿದೆಯೋ ಯಿಲ್ಲವೋ? ನಿತ್ಯವೂ ಹತ್ತು ಘಂಟೆಗೆ ಅಡಿಗೆ ಮಾಡುತ್ತಿದ್ದವನು ಇಂದು ಇನ್ನೂ ಅಡಿಗೆಯಾಗಿಲ್ಲವೆಂದು ಹೇಳಿ, ಇಷ್ಟು ಜನ

ಗಳನ್ನೂ ಸುಮ್ಮನೆ ಕಾಯುವಂತೆ ಮಾಡುತ್ತೀಯೆ' ಎಂದರು. ಅವನು ಹೇಳಿದ 'ಸ್ವಾಮಿ! ಉದ್ದೇಶಪೂರ್ವಕವಾಗಿ ನಾನು ಸಾವಕಾಶ ಮಾಡಲಿಲ್ಲ! ನೆನ್ನೆಯೆಲ್ಲ ಮಳೆ ಬಂದದ್ದರಿಂದ, ಸೌದೆಯಲ್ಲವೂ ನೆಂದುಹೋಗಿತ್ತು! ಸಾಲದ್ದಕ್ಕೆ, ವಿಶೇಷವಾದ ಹೆಚ್ಚಿನ ಅಡಿಗೆಗಳೂ ಆಗಬೇಕಿತ್ತು! ಆದುದರಿಂದ ಸ್ವಲ್ಪ ಸಾವಕಾಶವಾಯಿತು. ಇನ್ನೇನು ಆಗಿಹೋಯಿತು' ಎಂದನು. ಇದನ್ನು ಕೇಳಿ ರಾಯರಿಗೆ ಸಹಿಸಲಿಲ್ಲ. ಇನ್ನೂ ಅಡಿಗೆಯಾಗದಿರುವುದೊಂದು, ಎಲ್ಲರೂ ಕಾದಿರುವುದೊಂದು, ಎಲ್ಲರೆದುರಿಗೆ ಅಡಿಗೆಯವನು ಮರುಮಾತಾಡಿದುದೊಂದು, ಇವೆಲ್ಲ ಸೇರಿಕೊಂಡು, ರಾಯರ ಮನಸ್ಸಿಗೆ ಬಹಳ ಅವಮಾನವಾದಂತಾಗಿ, ಎಲ್ಲೆ ಮೀರಿ ಕೋಪ ಬಂದಿತು! ಮುಂದಿನ ಪರಿಣಾಮವನ್ನೂ ಮರೆತರು! 'ಏನಯ್ಯಾ! ಮಾತಿಗೆ ಮಾತು ಜೋಡಿಸುತ್ತೀಯೆ! ತಪ್ಪುಮಾಡಿರುವುದೂ ಅಲ್ಲದೆ, ಗರ್ವದ ಮಾತು ಬೇರೆಯೆ? ನಿನ್ನನ್ನು ಬಿಟ್ಟರೆ ಬೇರೆ ಗತಿಯಿಲ್ಲವೆಂಬ ಭಾವನೆಯೆ? ದುಡ್ಡು ಎರಚಿದರೆ ನಿನ್ನಂತಹವರೆಷ್ಟು ಜನ ಬಂದು ಬೀಳುವರು! ಹೊರಡು ಮೊದಲು ಮನೆ ಬಿಟ್ಟು! ಮುಂದಿನ ಕೆಲಸಗಳು ನಡೆಯುವವೋ ಯಿಲ್ಲವೊ ನೋಡುತ್ತೇನೆ' ಎಂದರು

ನಿಜವಾಗಿಯೂ ಇಂದು ಹನುಮಂತರಾಯನದೇನೂ ತಪ್ಪಿರಲಿಲ್ಲ! ಅವನೂ ಶಕ್ತಿ ಮೀರಿ ಪ್ರಯತ್ನಪಟ್ಟು ಅಡಿಗೆ ಮಾಡಿದ್ದನು. ಅವನು ಹೇಳಿದ ಕಾರಣಗಳು ನ್ಯಾಯವಾಗಿಯೇ ಯಿದ್ದುವು. ಅವನೇನು ನಳಮಹಾರಾಜನೇ? ನೋಡಿದೊಡನೆಯೇ ಅಡಿಗೆಯಾಗುವುದಕ್ಕೆ? ಇರಲಿ! ರಾಯರ ಮಾತು ಕಿವಿಗೆ ಬಿದ್ದೊಡನೆಯೆ, ಹನುಮಂತರಾಯನಿಗೂ ಸ್ವಲ್ಪ ಶಾಖವಾಯಿತು, ಲೋಕದಲ್ಲಿ ಸ್ವಾಭಿಮಾನದ ಮುಂದೆ ಏನು ತಾನೇ ನಿಂತೀತು? ಸರಿ! ಎದ್ದ! ರಾಯರಿದ್ದಲ್ಲಿಗೆ ಬಂದ!- ರಾಯರೆ 'ನಮಸ್ಕಾರ ಹೋಗಿಬರುತ್ತೇನೆ! ನಿಮ್ಮ ಮನೆಗೆ ನನಗಿಂತಲೂ ಯೋಗ್ಯರು, ಚಟುವಟಿಕೆಯುಳ್ಳವರು, ವಿಧೇಯರು ಹತ್ತಾರು ಜನರು ಬರಲಿ! ಸಂತೋಷ!

ಸೊಂಟಕಟ್ಟಿ ಕೆಲಸ ಮಾಡುವವನಿಗೂ ಹತ್ತು ಮನೆಗಳಿರುವುವೆಂಬುದನ್ನು ಮಾತ್ರ ಮರೆಯಬೇಡಿರಿ!'' ಎಂದು ಹೇಳುತ್ತ ತನ್ನ ಒಣಹಾಕಿರುವ ಬಟ್ಟೆಬರೆಗಳನ್ನು ಮಡಿಸಿಕೊಂಡು ಬಾಲು ಮಹಡಿಯ ಮೇಲಕ್ಕೆ ಹೋದನು

ಅಷ್ಟು ಹೊತ್ತಿಗೆ ಅವನ ಆ ಶಿಟ್ಟೊ ಸ್ವಲ್ಪ ಇಳಿಯಿತು. ಆಗ ಯೋಚಿಸಿದನು. "ಛೀ! ಛೀ! ನಾನು ಎಂತಹ ಕೆಲಸಮಾಡಿದೆ! ಇಂದಿನವರೆಗೂ ಯಜಮಾನರು ಒಂದು ಮಾತನ್ನೂ ಆಡಿದವರಲ್ಲವಲ್ಲ! ತಂದೆಯಂತಿದ್ದರಲ್ಲ ಏನೋ ಅವರೆಲ್ಲರೂ ಬಂದು ಕಾದಿದ್ದುದರಿಂದ, ನನ್ನನ್ನು ಒಂದು ಮಾತನ್ನು ಅಂದ ಮಾತ್ರಕ್ಕೆ—ನಾನು ಸಿಟ್ಟುಮಾಡಿಕೊಂಡು ಬಂದುಬಿಡುವುದೇ? ಮೌನವಾಗಿದ್ದುಬಿಟ್ಟು, ಸುಮ್ಮನೆ ಬಡಿಸಿದ್ದರೆ ಏನಾಗುತ್ತಿತ್ತು? ನನ್ನ ಗೌರವಕ್ಕೇನಾದರೂ ಹಾನಿತಟ್ಟುತ್ತಿತ್ತೆ? ಇಷ್ಟಕ್ಕೂ ನನ್ನ ಯೋಗ್ಯತೆಯೇನು? ಅವರ ಯೋಗ್ಯತೆಯೇನು? ಒಂದುವೇಳೆ ಅವರು ನಿತ್ಯವೂ ನಿಷ್ಠುರವಾಗಿ ಮಾತನಾಡುತ್ತಿದ್ದಿದ್ದರೆ, ನಾನು ಸ್ವಲ್ಪವೂ ದಾಕ್ಷಿಣ್ಯವಿಡಬೇಕಾದುದಿರಲಿಲ್ಲ! ಹಾಗಲ್ಲವಲ್ಲ! ಧರ್ಮರಾಜನಂತಹವರು! ಏನುಮಾಡಲಿ? ಹಿಂತಿರುಗಿ ಹೋಗಲೇ? ತಪ್ಪಾಯಿತೆಂದು ಹೇಳಲೇ? ಹೌದು! ನಾನಾಗಿಯೇ ಹೋದಪ್ಪಕ್ಕೆ, ಅವರೂ 'ಹೋಗಲಿ ಬಿಡಪ್ಪಾ' ಎಂದರಂತೂ ಸರಿ, ಇಲ್ಲದಿದ್ದರೋ? ಆಗ ನನ್ನ ಸ್ವರೂಪವೇನಾಗುವುದು? ಆಗಲಿ! ಹಾಗೂ ಹೀಗೂ ಸ್ವಲ್ಪ ತಡಮಾಡುತ್ತಿರುವೆನು. ಏನಾದರೂ ನೆಪವು ಸಿಕ್ಕಿದರೆ, ಅದನ್ನೇ ದೊಡ್ಡದಾಗಿ ಮಾಡಿಕೊಂಡು, ಒಳಕ್ಕೆ ಹೋಗಿ ಅವರ ಕ್ಷಮೆಯನ್ನು ಬೇಡುವೆನು" ಎಂದುಕೊಂಡನು.

ಈ ಕಡೆಯಲ್ಲಿ, ಹನುಮಂತರಾಯನು ಹೊರಟುಹೋಗುತ್ತಲೇ, ರಾಯರ ಅವಸ್ಥೆಯು ಬೇಡವಾಯ್ತು! ಸಿಟ್ಟೆಲ್ಲಾ ಮಾಯವಾಯ್ತು!

ನೆಲಕ್ಕಿಳಿದರು! ಯೋಚಿಸಿದರು! "ನಾನೆಂತಹ ಮುಟ್ಠಾಳ ಕೆಲಸಮಾಡಿದೆ? ಎಲ್ಲರೂ ಬಂದಿದ್ದ ವೇಳೆಯಲ್ಲಿ, ಹಿಂದುಮುಂದು ಯೋಚಿಸದೆ ಅವನ ಮೇಲೆ ರೇಗಿ ಕಳುಹಿಸಿಬಿಟ್ಟೆ! ನನ್ನ ಅಧಿಕಾರವನ್ನೂ ತೋರಿಸಿದೆ! ಈಗ ಅವನಿಗಾದ ನಷ್ಟವೇನು? ಈ ಮನೆಯಲ್ಲದಿದ್ದರೆ ಮತ್ತೊಂದು ಮನೆ ಇದ್ದೇ ಇರುವುದು ಇಷ್ಟಕ್ಕೂ ಅವನದೇನು ತಪ್ಪು? ಸರಿಯಾದ ಪದಾರ್ಥಗಳನ್ನು ಒದಗಿಸ ದಿದ್ದುದು ನಮ್ಮ ತಪ್ಪಲ್ಲವೇ? ಎಂದೂ ಎದುರ ಮಾತಾಡಿದವನಲ್ಲವಲ್ಲ ಹೊತ್ತೂ ಮೀರಿದವನಲ್ಲವಲ್ಲ! ಅಡಿಗೆಯನ್ನು ಕೆಡಿಸಿದವನಲ್ಲವಲ್ಲ! ಇಂದು ತಾನೇ ಅವನು ಹೇಳಿದುದೇನು? 'ಆಗಿಹೋಯಿತು ಹತ್ತೇ ನಿಮಿಷ ತಡ' ವೆಂದಲ್ಲವೇ' ಹೇಳಿದನು? ಅಷ್ಟಕ್ಕೇ ನಾನು ರೇಗಬೇಕೆ? ನನಗೆಂತಹ ವಿಷಮಬುದ್ಧಿ ಬಂದಿತು? ಈಗೇನು ಮಾಡಲಿ? ಮುಂದಿನ ಗತಿಯೇನು? ಎಲ್ಲರೂ ಕಾದಿರುವರಲ್ಲ! ಬಹುಶಃ ಅವನು ಇನ್ನೂ ಮಹಡಿಯ ಮೇಲಿರ ಬಹುದು! ನಾನೇ ಹೋಗಿ, ಅವನನ್ನು ಬಾರಪ್ಪಾ' ಎಂದು ಕೂಗಲೇ? ಕೂಗಿದರೆ ಬಂದರಂತೂ ಸರಿಯೆ! ಬಾರದಿದ್ದರೆ ಇನ್ನೂ ಅವಮಾನ ವಲ್ಲವೇ?" ಎಂದು ತಳಮಳ ಗುಟ್ಟುತ್ತಿರುವಾಗಲೇ, ಪಾರ್ವತಮ್ಮನವರು, ಒಳಕ್ಕೆ ಬಂದು ನೋಡುತ್ತಾರೆ! ಎಲ್ಲರೂ ಹಾಗೆಯೇ ಕುಳಿತಿರುತ್ತಾರೆ! ಅಡಿಗೆಯವನೂ ಇಲ್ಲ! ನೋಡಿದರು! ವಿಚಾರವೇನೆಂದು ಯಜಮಾನರನ್ನು ಕೇಳಿದರು! ರಾಯರೂ ತಮ್ಮ ಅವಿವೇಕವನ್ನು ಹೇಳಿ 'ಹೇಗಾದರೂ ಅವ ನನ್ನು ಕರೆದುಕೊಂಡು ಬಾ, ಮಹಡಿಯ ಮೇಲಿರಬಹುದು' ಎಂದರು. ಪಾರ್ವತಮ್ಮನವರು 'ಎಂತಹ ವೇಳೆಯಲ್ಲಿ ಎಂತಹ ಕೆಲಸಮಾಡಿದಿರಿ! ಅವ ನಾಗುವ ಹೊತ್ತಿಗೆ, ಹಸಿಯ ಸೌದೆಯ ಹಿಂಸೆಯನ್ನು ಲೆಕ್ಕಕ್ಕೆ ತಾರದೆ, ಗೊಣಗುಟ್ಟದೆ, ಇಷ್ಟು ಬೇಗ ಅಡಿಗೆಮಾಡಿದನು! ಇನ್ನೊಬ್ಬನಿದ್ದಿದ್ದರೆ ನೋಡಬೇಕಿತ್ತು! ನಮ್ಮ ಪಾಡನ್ನು! ಮೇಲಾಗಿ ಅವನೋ ಚಿನ್ನದಂತಹ ವನು! ಹೋಗಲಿ. ನಾನು ಅವನನ್ನು ಕರೆದುಕೊಂಡು ಬರುತ್ತೇನೆ, ಅವನು

ಖಂಡಿತವಾಗಿ ಪುರುಮಾತಾಡದೆ ಬರುತ್ತಾನೆ! ಆಗಲಾದರೂ ನೀವು ಅವನಿಗೆ ಸಮಾಧಾನದ ಮಾತುಗಳನ್ನಾಡಿರಿ! ಪಾಪ ಎಂದು ಹೇಳಿ, ಮಹಡಿಯ ಮೇಲಕ್ಕೆ ಹತ್ತಿ, ಹನುಮಂತರಾಯನಿದ್ದಲ್ಲಿಗೆ ಹೋದರು.

ಭಾಗ್ಯಲಕ್ಷ್ಮಿಯು ಹಾಗೆ ತನ್ನ ಕಡೆಗೇ ಬರುತ್ತಿದ್ದ, ಪಾರ್ವತಮ್ಮನವರನ್ನು ನೋಡಿ, ನಮ್ಮ ಹನುಮಂತರಾಯನು ಪಾತಾಳಕ್ಕಿಳಿದುಹೋದ! ಅಷ್ಟರಲ್ಲೇ ಅವರು, " ಏನೋ ಹನುಮಪ್ಪ! ಹೀಗೆಯೋ ನೀನು ಮಾಡುವುದು? ಅದೂ ಇಂತಹ ವೇಳೆಯಲ್ಲಿ? ಎಲ್ಲರೂ ಬಂದು ಕಾದಿರುವಾಗಲೇ? ನಮಗೆ ಅವಮಾನವಾದರೆ, ನಿನಗೂ ಅವಮಾನವಲ್ಲವೆ? ಇಷ್ಟು ದಿವಸ ನಮ್ಮನ್ನು ತಾಯಿ ತಂದೆಗಳಂತೆ ನೋಡಿಕೊಳ್ಳುತ್ತಿದ್ದೆಯಲ್ಲ! ಈ ದಿವಸ ನಿನ್ನ ಆ ಪುತ್ರತ್ವವು ಎಲ್ಲಿಹೋಯಿತು! ನಿನಗೇಕೆ ಈ ದಿವಸ ಇಂತಹ ಬುದ್ಧಿ ಹುಟ್ಟಿತು! ಹಾಗೂಯಿರಲಿ! ನೀನೇ ಹೇಳು! ತಂದೆಯಂತಿರುವ ಅವರು, ನಿನ್ನನ್ನಾಗಲಿ ನನ್ನನ್ನಾಗಲಿ ಒಂದು ಮಾತನ್ನೂ ಅನ್ನಬಾರದೇ? ಅವರಿಗಷ್ಟು ಅಧಿಕಾರವನ್ನೂ ಕೊಡಲಾರೆಯಾ? ಅವರು ಅಂದರೆ ತಪ್ಪೆ? ಅಪ್ಪಾ! ಆದದ್ದು ಆಯಿತು! ಏನೋ ವಿಷಯಗಳಿಗೆ! ಇಬ್ಬರಿಗೂ! ಹೋಗು! ಬೇಗ ಎಲ್ಲರಿಗೂ ಬಡಿಸು ಎಂದರು.

ಮೊದಲೇ ನಮ್ಮ ಹನುಮಪ್ಪನು ಹಣ್ಣಾಗಿದ್ದನು. ಪಾರ್ವತಮ್ಮನವರ ಪ್ರಿಯವಾದ ಮಾತನ್ನು ಕೇಳಿದ ಮೇಲಂತೂ ಕೇಳಬೇಕೆ? 'ಅಮ್ಮಾ! ತಾಯಿ! ಸರ್ವಾಪರಾಧವಾಯಿತು! ಕ್ಷಮಿಸಿರಿ' ಎಂದು ಕಣ್ಣೀರು ಸುರಿಸುತ್ತಾ, ದೀರ್ಘದಂಡ ನಮಸ್ಕಾರಮಾಡಿ, ಸರ್ರನೆ, ಕೆಳಕ್ಕೆ ಬಂದು 'ರಾಯರೇ ತಪ್ಪಾಯಿತು! ಕ್ಷಮಿಸಿರಿ' ಎಂದು ನಮಸ್ಕರಿಸಿ, ನಿಲ್ಲದೆ ತನ್ನ ಕೆಲಸಕ್ಕೆ ಹೊರಟುಹೋದನು. ಅತ್ತ ಅಮ್ಮನವರ ಕಣ್ಣಿನಲ್ಲೂ, ಹನುಮಪ್ಪನ ವಿನಯವನ್ನು ನೋಡಿ, ನೀರುಬಂತು. ಇತ್ತ ರಾಯರೂ, ಹನು

ಮಪ್ಪನು ಬಂದು 'ತಪ್ಪಾಯಿತು ಕ್ಷಮಿಸಿರಿ' ಎಂದು ನಮಸ್ಕರಿಸಲು ಕಣ್ಣಿನಲ್ಲಿ ಸ್ವಲ್ಪ ನೀರು ತಂದುಕೊಂಡು 'ಅಪ್ಪಾ! ನಿನ್ನದೇನೂ ತಪ್ಪಿಲ್ಲ! ನಾನೇ ಸ್ವಲ್ಪ ದುಡುಕಿದೆನು! ಇದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ಕೆಲಸ ಮಾಡಪ್ಪ' ಎಂದರು.

ನಾನು ಇವೆರಡೂ ಪ್ರಸಂಗಗಳನ್ನು ನೋಡಿದೆ! ನಗುಬಂದಿತು! ನನ್ನ ತಮ್ಮನ ಮಾತು ನೆನಪಿಗೆ ಬಂದು, ಅವನ '**ಅದನ್ನೇ ಉಂಡೇನು ಕದ ತೆಗಿ**' ಎಂಬ ಮಾತು ಇಲ್ಲಿಯಾ ಇಬ್ಬರಲ್ಲಿಯೂ ನಿದರ್ಶನಕ್ಕೆ ಬಂದಿತೆಂದುಕೊಂಡೆನು. ಸರಿ! ಇನ್ನು ಮುಂದಿನ ವಿಷಯಗಳನ್ನು ನಿಮಗೆ ಹೇಳಬೇಕಾಗಿಲ್ಲವಷ್ಟೆ! ಎಲ್ಲವೂ ಕ್ರಮವಾಗಿಯೇ ನಡೆದು ನಮ್ಮ ನಮ್ಮ ಮನೆಗೆ ಹೋದೆವು.

## ೪ ನೇ ಪ್ರಕರಣ

ನಮ್ಮ ಮನೆಯ ಎದುರಿನಲ್ಲಿ ತಮ್ಮಣ್ಣರಾಯರೆಂಬುವರೊಬ್ಬರಿದ್ದರು; ಅವರಿಗೆ ನಮ್ಮೂರಿನ ಸಾಹುಕಾರ್ ಚನ್ನಪ್ಪನವರ ಅಂಗಡಿಯಲ್ಲಿ ಗುಮಾಸ್ತೆ ಕೆಲಸವಿತ್ತು, ಇವರಿಗೆ ನಲವತ್ತೈದು ವರ್ಷಗಳಾಗಿದ್ದುವು, ಮೊದಲಿನ ಇಬ್ಬರು ಹೆಂಡತಿಯರೂ ತೀರಿಹೋಗಿದ್ದುದರಿಂದ, ಮೂರನೆಯ ಮದುವೆಯನ್ನು ಮಾಡಿಕೊಂಡಿದ್ದರು, ಇವರ ಈಗಿನ ಹೆಂಡತಿಗೆ ಇನ್ನೂ ಇಪ್ಪತ್ತು ವರುಷ! ತಕ್ಕಷ್ಟು ರೂಪವೂ ಇದ್ದಿತು.

ಇವರ ಮನೆಯಲ್ಲಿ, ಗಂಡಹೆಂಡಂದಿರಿಬ್ಬರೇ ಇದ್ದರು, ರಾಯರು ಬೆಳಿಗ್ಗೆ ಎದ್ದು, ಬೆಳಗಿನ ಕಟ್ಟಳೆಗಳನ್ನು ತೀರಿಸಿಕೊಂಡು, ಅಲ್ಪಾಹಾರವನ್ನು (Tiffin) ಮಾಡಿಕೊಂಡು, ಅಂಗಡಿಗೆಹೋಗಿ, ಮಧ್ಯಾಹ್ನ 12 ಘಂಟೆಗೆ ಮನೆಗೆ ಬಂದು, ಊಟ ಮಾಡುತ್ತಿದ್ದರು, ಪುನಃ ಮಧ್ಯಾಹ್ನ 3 ಘಂಟೆಗೆ

ಒಂದಿಷ್ಟು ಅಲ್ಪಾಹಾರಮಾಡಿಕೊಂಡು, ಅಂಗಡಿಗೆ ಹೋಗಿ, ರಾತ್ರಿ 9½ ಘಂಟೆಗೆ ಅಂಗಡಿಯನ್ನು ಮುಚ್ಚಿದ ನಂತರ ಮನೆಗೆ ಬರುತ್ತಿದ್ದರು.

ಮೇಲೆ ಹೇಳಿದಂತೆ ರಾಯರಮನೆಯಲ್ಲಿ ಹೆಚ್ಚುಜನರಾರೂ ಯಿರಲಿಲ್ಲ ವಾದುದರಿಂದ, ಹೆಚ್ಚಿನ ಕೆಲಸವೂ ಇರಲಿಲ್ಲ! ಇದರಿಂದ, ರಾಯರ ಹೆಂಡತಿಗೆ, ಒಳಗೇ ಕುಳಿತು ಕುಳಿತು ಬೇಸರವಾಗಿ, ಸ್ವಲ್ಪಹೊತ್ತು ಬೀದಿಯ ಜಗಲಿಯ ಮೇಲೆ ಬಂದು ಕೂರುವ ಪದ್ಧತಿಯಾಯ್ತು, ಇದು ಸ್ವಲ್ಪ ಪ್ರಬಲಿಸಿ ಕಂಡವರ ಮನೆಗಳಿಗೆ ಹೋಗುವುದಾಯಿತು! ಇದೇ ಕ್ರಮೇಣ ಪ್ರಬಲವಾಗಿ ರಾಯರ ಹೆಂಡತಿಯ ನಡತೆಯು, ಸ್ವಲ್ಪ ಮಾಸಿಹೋಗಿ, ಕ್ರಮ ಕ್ರಮವಾಗಿ ಪೂರಾ ಕೊಳೆಯಾಯಿತು.

ಊರಲ್ಲೆಲ್ಲಾ ಈ ಮಾತೇ ಮಾತು! ರಾಯರ ಕಿವಿಗೂ ಬಿದ್ದಿತು! ಮನೆಗೆಬಂದರು! ಹೆಂಡತಿಗೆ ವಿವೇಕಹೇಳಿದರು! ಹೆದರಿಸಿದರು, ಬಳ್ಳೆಯ ಮಾತಿನಲ್ಲಿ ಹೇಳಿದರು, ಭೇದೋಪಾಯ ಮಾಡಿದರು "ಇನ್ನು ಸ್ವಲ್ಪ ದಿನಗಳು ನೋಡುತ್ತೇನೆ, ನೀನು ಮುಂದಾದರೂ ನೆಟ್ಟಗಿದ್ದರೆ ಸರಿ, ಇಲ್ಲವಾದರೆ, ನಿನ್ನನ್ನು ಮನೆಬಿಟ್ಟು ಹೊರಡಿಸುತ್ತೇನೆ" ಎಂದರು.

ರಾಯರು ಬಹಳ ಎಚ್ಚರಿಕೆಯುಳ್ಳವರು! ಮನೆಯವಳ ವಿಷಯದಲ್ಲಿ ಅನುಮಾನ ಹುಟ್ಟಿದ್ದರಿಂದ,ಮುಖ್ಯ ಮುಖ್ಯವಾದ ಬೆಲೆಬಾಳತಕ್ಕ ಪದಾರ್ಥ ಗಳನ್ನೆಲ್ಲಾ, ತೆಗೆದು ಕೊಂಡು, ಸಾಹುಕಾರರ ಅಂಗಡಿಯಲ್ಲಿಟ್ಟುಬಿಟ್ಟರು. ಮತ್ತೊಂದು ವಾರಕಳೆಯಿತು! ಊರಿನಲ್ಲಿ ರಾಯರಎದುರಿಗೇನೇ ಅವರ ಕಿವಿಯಲ್ಲಿ ಬೀಳುವಂತೆಯೆ ಅವರ ಹೆಂಡತಿಯ ಮಾತುಗಳು ಕೇಳಬರಲು ಪ್ರಾರಂಭವಾಯಿತು! ರಾಯರಿಗೆ ಸಿಟ್ಟುತಲೆಗೇರಿತು! ಮನೆಗೆ ಬಂದರು! ತಮ್ಮ ಹೆಂಡತಿಯನ್ನು 'ತೊಲಗು ಮನೆಬಿಟ್ಟು! ನಿನ್ನಪಾಡಿದ್ದಂತ ನೋಡಿಕೊ' ಎಂದುಹೇಳಿ, ಉಟ್ಟಸೀರೆಯಲ್ಲಿ ಹೊರಕ್ಕೆ ನೂಕಿಯೆ ಬಿಟ್ಟರು.

ಇದನ್ನೆಲ್ಲಾ ನೋಡಿ, ನನಗೆ, ನಗು ಸಂತೋಷ, ಕನಿಕರ ಎಲ್ಲವೂ ಏಕಕಾಲದಲ್ಲಿ ಉಂಟಾದುವು, ರಾಯರು ರಾತ್ರೆಯಲ್ಲಿ, ಒಂಟಿಯಾಗಿಯೆ ಕಾಲಕಳೆದರು, ಸರಿಯಾಗಿ ನಿದ್ರೆಬರಲಿಲ್ಲ ಅತ್ತರು! ಕರೆದರು! ಹಾಗೂ ಹೀಗೂ ಬೆಳಗಾಯಿತು! ಎದ್ದರು 'ಕೆಟ್ಟೆನೇ' ಎಂದು ಬಚ್ಚಲು ಒಲೇಹಚ್ಚಿದರು, ಸ್ನಾನವಾಯಿತು! ಕಣ್ಣಿನೊಳಗೆಲ್ಲ ಹೊಗೆ ತುಂಬಿಕೊಂಡು ಒಳಗಿದ್ದ ನೀರನ್ನೆಲ್ಲ ಹೊರಚಲ್ಲಿತು.

ರಾಯರು ಮಧ್ಯಾನ್ಹ ಮನೆಗೆ ಬಂದರು ಅಷ್ಟುಹೊತ್ತಿಗೇನೇ ಹನ್ನೆರಡು ಘಂಟೆಯಾಗಿತ್ತು, ಪುನಃ ಒಲೆ ಹಚ್ಚಿದರು! ಅನ್ನವಾಯಿತು! ಸಾರು ಮಾಡಿ ಕೊಳ್ಳಲು ಬೇಸರವಾಯ್ತು! ಒಂದಿಷ್ಟು ಮೆಣಸಿನಪುಡಿ ಉಪ್ಪು ತುಪ್ಪದ ಅನ್ನ, ಮೊಸರನ್ನ ಇವೆರಡನ್ನೂ ಊಟಮಾಡಿದರು ಇಷ್ಟುಹೊತ್ತಿಗೆ ಮಧ್ಯಾನ್ಹ 1½ ಘಂಟೆಯಾಯಿತು ರಾಯರು ಮೂರುಘಂಟೆಯ ಪಾನಕ್ಕೆ ಸ್ವಲ್ಪನೀರನ್ನು ಒಲೆಯಮೇಲಿಟ್ಟು ಸ್ವಲ್ಪ ಹಾಗೆಯೇ ಮಲಗಿಕೊಂಡರು ಮೂರು ಘಂಟೆಯಾಯಿತು ಸ್ವಲ್ಪ ಚಹಾ (ಟೀ—Tea) ಕುಡಿದದ್ದೂ ಆಯಿತು, ಅಂಗಡಿಗೆ ಹೋದರು ರಾತ್ರಿ 9 ಘಂಟೆಗೆ ಬಂದರು ಪುನಃ ಮಧ್ಯಾನ್ಹದಂತೆಯೆ ಒಲೆ ಹಚ್ಚಿದರು ಅಡಿಗೆ ಊಟ ಮಾಡಿದರು ಚಳಿಗಾಲವಾದುದರಿಂದಲೂ, ವಯಸ್ಸಾಗಿತ್ತಾದ್ದರಿಂದಲೂ ಅವರು ಮಧ್ಯಾನ್ಹದ ತಂಗಳನ್ನು ಮಿಗಿಸಿ ಊಟಮಾಡುತ್ತಿರಲಿಲ್ಲ ರಾತ್ರಿಯೆಲ್ಲಾ, ಒಂಟಿಯಾಗಿ ಮಲಗಿ, ನಿದ್ರೆಬಾರದೆ, ನರಳಾಡಿದರು ಹೊರಳಾಡಿದರು.

ಸರಿ! ಹೀಗೆಯೇ ಮೂರುದಿನಗಳು ಕಳೆದುವು! ರಾಯರಿಗೆ ಮೂರು ಯುಗಗಳು ಕಳೆದಂತೆಯೇ ಆಯಿತು! ನಾಲ್ಕನೆಯ ದಿನ ಬೆಳಿಗ್ಗೆ, ನಾನು ಎಲ್ಲಿಂದಲೋ ಮನೆಗೆ ಬರುತ್ತಿರುವಾಗ, ರಾಯರಮನೆಯ ಬಾಗಿಲು ತೆರೆದಿತ್ತು ನನ್ನನ್ನು ಕಂಡರು! ಒಳಕ್ಕೆ ಕರೆದರು! ರಾಯರಿಗೂ ನನಗೂ ಸ್ನೇಹವಿತ್ತು?

ಆಗಾಗ್ಯೆ ತಮ್ಮ ಗೃಹ ಕೃತ್ಯಗಳೆಲ್ಲವನ್ನೂ ಹೇಳಿಕೊಳ್ಳುತ್ತಿದ್ದರು ! ಅವರು ಇನ್ನೆಲ್ಲಿಗೂ ಹೋಗುತ್ತಿರಲಿಲ್ಲ ಯಾರಲ್ಲಿಯಾ ಮಾತನಾಡುತ್ತಿರಲಿಲ್ಲ! ಬಂದರೆ ಮನೆ, ಹೋದರೆ, ಅಂಗಡಿ ! ಮಾತನಾಡುವುದಾದರೆ ನನ್ನಲ್ಲಿ! ಇಷ್ಟೆ! ಇರಲಿ, ರಾಯರು ನನ್ನಲ್ಲಿ ಆಗಾಗ್ಯೆ ಸಂಸಾರದ ವಿಷಯಗಳನ್ನು ಹೇಳಿಕೊಂಡಾಗ, ಅವರಿಗೆ ತೃಪ್ತಿಯಾಗುವಂತ ಸಮಾಧಾನವನ್ನೂ, ಹೇಗೆ ಹೇಗೆ ನಡೆದು ಕೊಳ್ಳಬೇಕೆಂಬುದನ್ನೂ ನನಗೆ ತಿಳಿದ ಮಟ್ಟಿಗೆ ಹೇಳಿಕೊಡುತ್ತಿದ್ದೆ! ಅವರೂ ಅದರಂತೆಯೇ ನಡೆದು ಕೊಳ್ಳುತ್ತಿದ್ದರು.

ಮೇಲೆ ಹೇಳಿದಂತೆ, ರಾಯರು ನನ್ನನ್ನು ಕರೆದು, ಕೂರಿಸಿಕೊಂಡು, ತಮ್ಮ ಕಷ್ಟಗಳೆಲ್ಲವನ್ನೂ ಹೇಳಿಕೊಂಡು ವ್ಯಸನಪಟ್ಟರು, ಅದನ್ನು ನೋಡಿ ನನಗೂ ವ್ಯಸನವಾಗಿ ಅವರ ವಿಷಯದಲ್ಲಿ ಕನಿಕರವುಂಟಾಯ್ತು, ನಾನು ಕೇಳಿದೆ 'ರಾಯರೇ, ಹಾಗಾದರೆ ಮುಂದೇನು ಮಾಡಬೇಕೆಂದಿರುವಿರಿ ?' ಎಂದೆನು 'ಏನೂಯಿಲ್ಲ, ಪುನಃ ನನ್ನ ಹೆಂಡತಿಯು, ತಾನಾಗಿಯೇ ತಪ್ಪಾಯಿ ತೆಂದು ಹೇಳಿಕೊಂಡು ಬಂದರೆ, ಇನ್ನು ಮುಂದಾದರೂ ಒಳ್ಳೆಯ ನಡತೆ ಯಿಂದ ವಿಧೇಯಳಾಗಿ ನಡೆದು ಕೊಳ್ಳುತ್ತೇನೆಂದು ಕೇಳಿ ಕೊಂಡರೆ, ಅವಳನ್ನು ಓಡಿಸದೆ, ಏನಾದರೂ ಆಗಲೆಂದು, ವಿವೇಕ ಹೇಳುತ್ತಾ, ಸಂಸಾರ ಮಾಡಿಕೊಂಡಿರಲು ಯೋಚಿಸಿರುತ್ತೇನೆ ಇಲ್ಲದಿದ್ದರೆ ನಾನು ಬೇರೆ ಈ ಕಷ್ಟ ಗಳಲ್ಲಿ ಸಿಕ್ಕಿ, ಸಾಯಲಾರೆ; ಹೀಗೆ ಕಷ್ಟಪಟ್ಟು ಕಷ್ಟಪಟ್ಟು ಸಾಯುವುದ ಕ್ಕಿಂತ, ಒಂದೇಸಾರಿಕೆರೆ, ಕೊಳ, ನದಿಗಳ ಪಾಲಾಗುವುದು ಎಷ್ಟೋ ಮೇಲು' ಎಂದರು.

ನಾನು 'ನೀವು ಹೇಳುವುದು ಸರಿಯೆ! ಆದರೆ ಓಡಿ ಹೋದವಳನ್ನು ಪುನಃ ಸೇರಿಸಿಕೊಂಡರೆ, ಸಮಾಜವು ನಿಮ್ಮನ್ನು 'ಛೀ' ಮಾಡುವುದಲ್ಲ! ಏನುಮಾಡುವಿರಿ? ಆಗ ಇನ್ನೂ ತೊಂದರೆಯಲ್ಲ? ಎಂದೆನು,

ಅವರಂದರು 'ಥತ್, ನಮ್ಮ ಹಾಳು ಸಮಾಜಕ್ಕೆ ಬೆಂಕಿಹಚ್ಚಿರಿ! ನಮ್ಮ ಸಮಾಜವೂ ಒಂದು ಸಮಾಜವೇ? ಇದು ಸಮಾಜವೂ ಅಲ್ಲ ಸಮಾಜದ ಹುಟ್ಟೂ ಅಲ್ಲ! ಹಾಳು ಸಮಾಜ! ಊರು ಸಮಾಜವಾದರೆ ಅದರ ರೀತಿ ಬೇರೆ! ಕರುಣವಿಲ್ಲ! ನ್ಯಾಯವಿಲ್ಲ! ಒಬ್ಬರಿಗೊಂದು! ಮತ್ತೊಬ್ಬರಿ ಗೊಂದು! ತಮಗೆ ಬೇಕಾದರೆ ಒಂದು ತರಹ, ಬೇಡವಾದರೆ ಒಂದು ತರಹ! ಯುಕ್ತಾ ಯುಕ್ತ ವಿಮರ್ಶೆ ಮಾಡಬೇಕೆಂಬುದಂತೂ ಆ ಸಮಾಜದ ತಲೆಗೇ ಅಂಟುವುದಿಲ್ಲ! ಇಂತಹ ಸಮಾಜವನ್ನು ಕಟ್ಟಿಕೊಂಡು ಮಾಡುವುದೇನು? ಕಾಡಿಗೆ ಹೋಗಬೇಕು! ಅಳಬೇಕು' ಎಂದರು.

ನಾನು ಕೇಳಿದೆ! ಅದೇಕೆ ರಾಯರೇ ಹಾಗೆನ್ನುವಿರಿ? ನೀವುಹೇಳಿದಂತೆ ಎಲ್ಲರೂ ಯೋಗ್ಯರೇ ಅಲ್ಲದೇ ಹೋದರೂ, ಕೆಲವರಾದರೂ, ಒಳ್ಳೆಯವರು, ಕರುಣವುಳ್ಳವರು, ನ್ಯಾಯಪರರು, ಯುಕ್ತಾ ಯುಕ್ತ ವಿಮರ್ಶಕರು ಇದ್ದೇ ಯಿರುವರಲ್ಲವೆ? ಅದರಲ್ಲಿ ನೀವು ಸಮಾಜದ ಮೇಲೆ ಹೊರಿಸಿದ ತಪ್ಪುಗಳಿಗೆ ಆಧಾರವೇನಾದರೂ ಉಂಟೇ? ಸಕಾರಣವಾಗಿ ಹೇಳಿರಿ! ಆಗ ನಾನೂ ತಮ್ಮ ಅಭಿಪ್ರಾಯಕ್ಕೇ ಬರುತ್ತೇನೆ' ಎಂದೆನು.

ಅವರು 'ನೋಡಿ ಸಮಾಜಕ್ಕೆ ಕರುಣವಿಲ್ಲ' ಎಂಬುದಕ್ಕೆ ಹೇಳುತ್ತೇನೆ, ಕೇಳಿರಿ! ನಾನು, ಈ ಸಮಾಜದ, ದೂರಿಗೂ, ಅಂದು ಆಡುವುದಕ್ಕೂ ಹೆದರಿ ಕೊಂಡು, ನನ್ನ ಹೆಂಡತಿಯನ್ನು ಹೊರಗೆ ನೂಕಿಬಿಟ್ಟು, ಮೂರು ದಿನಗಳಾಗಿ ಹೋಯಿತು. ಅವಳು ಹೊರಟುಹೋಗಿ ಮೂರು ದಿನಗಳಾದರೂ ನಿಮ್ಮ ಈ ಸಮಾಜದಲ್ಲಿ, ಯಾರಾದರೂ, ಬಂದು, ನನ್ನನ್ನು 'ಏನಪ್ಪಾ! ನಿನ್ನ ಸ್ಥಿತಿಯೇನು? ಗತಿಯೇನು? ಉಂಡೆಯಾ? ತಿಂದೆಯಾ? ಪಾಪ! ನಿನಗೆಷ್ಟು ಕಷ್ಟ! ಹೊರಗೆ ಗಂಡಸಾಗಬೇಕು! ಒಳಗೆ ಹೆಂಗಸಾಗ

ಬೇಕು.........ಇತ್ಯಾದಿಯಾಗಿ ಏನಾದರೂ ನನ್ನನ್ನು ವಿಚಾರಿಸಿರುವರೋ? ನೀವೇ ಹೇಳಿ' ಎಂದರು.

ಇದನ್ನು ಕೇಳಿ ನನಗೇ ಸ್ವಲ್ಪ ನಾಚಿಕೆಯಾಯಿತು! ಏಕೆಂದರೆ— 'ಇಷ್ಟ ಸ್ನೇಹಿತನೆಂದು ಹೇಳಿಕೊಳ್ಳುವ, ನಾನೇ, ಅವರನ್ನು ಕಂಡರೂ ಕಾಣದಂತಿದ್ದೆ! ಏನಾದರೂ ಮಾಡಿಕೊಳ್ಳಲಿ, ಅವರ ತಲೆಪಾಡೆಂದು ಸುಮ್ಮನಿದ್ದೆ!' ಇನ್ನು ಬಾಕಿಯವರೆಲ್ಲರೂ ನನ್ನ ಖಾಸಾ ಅಣ್ಣ ತಮ್ಮಂದಿರೇನೇ! ನನಗಿಂತಲೂ ಕೇಡು! ಅವರನ್ನು ಕೇಳಬೇಕೇ? ಇರಲಿ, ಆ ಮೇಲೆ ರಾಯರನ್ನು ಕೇಳಿದೆ, "ನೀವು ಕೇಳಿದ್ದೇನೋ ಸರಿಯೇ, ಆದರೆ ಊರಿನವರಿಗೆ ಇನ್ನೇನೂ ಕೆಲಸವಿಲ್ಲವೇ? 'ಯಾವ ಮನೆಯಲ್ಲಿ ಏನೇನಾಯಿತು? ಊಟವಾಯಿತೇ? ತಿಂಡಿಯಾಯಿತೇ? ಅಡಿಗೆಮಾಡಿಸಿಕೊಂಡರೇ? ಹೆಂಡತಿ ಹೊರಗಾಗಿರುವಳೇ? ನಿಪ್ಪುಬಂದಿತ್ತೇ ಇಲ್ಲವೇ?'..........ಇತ್ಯಾದಿಯಾಗಿ ಇವುಗಳ ವಿಚಾರಮಾಡುವುದೇ ಕೆಲಸವೇ? ಅಥವಾ ಸಾಧ್ಯವೇ? ನೀವೇ ಹೇಳಿರಿ!" ಎಂದೆ ರಾಯರಂದರು. "ನೀವು ಹೇಳಿದ್ದು ಸರಿಯೆ, ನಾನೂ ಒಪ್ಪಿಕೊಳ್ಳುತ್ತೇನೆ. ನೀವು ಹೇಳಿದಂತೆ, ಸಮಾಜವು ಯಾರ—ಯಾರ ತಂಟೆಗೂ ಹೋಗದಿದ್ದರೆ, ನನಗೂ ಸಮ್ಮತವೇ! ಹಾಗಿಲ್ಲವಲ್ಲ: 'ಅವಳು ಅಂತಹವಳು—ಇವನು ಇಂತಹವನು, ಅವರ ಮನೆಯು ದೋಸೆ ತೂತು! ಇವರ ಮನೆಯು ಕಾವಲಿಯೇ ತೂತು!..........' ಎಂದು ಮೂರು ಹೊತ್ತೂ ಆಡಿಕೊಳ್ಳುವುದು ಮಾತ್ರ ಸಮಾಜಕ್ಕೆ ಬೇಕೋ? ಇನ್ನೊಬ್ಬರನ್ನು ದೂಷಿಸಲಿಕ್ಕೆ ಸಮಾಜ! ಸಹಾಯಕ್ಕೆ ಸಮಾಜವಲ್ಲ! ದೂಷಣೆಯ ವಿಷಯದಲ್ಲಿ ಮಾತ್ರ ಸಮಾಜವು, ಮನೆ ಮನೆಗೂ ಪ್ರವೇಶಮಾಡಬೇಕು! ಅಲ್ಲವೇ? ಇರಲಿ, ಇನ್ನು ಉಳಿದ ನನ್ನ ಆಕ್ಷೇಪಗಳಿಗೂ, ನೀವು ಕೇಳಬೇಡಿ. ನಾನೇ ಸಮಾಧಾನ ಹೇಳುತ್ತೇನೆ ಕೇಳಿರಿ! ಅಂದರೆ ನನ್ನನ್ನು ಮಹಾ

ಪರಿಶುದ್ಧನೆಂದು ಹೇಳಿಕೊಳ್ಳುವುದಿಲ್ಲ! ಆದರೆ ಒಬ್ಬನು, ರಾತ್ರಿಯಲ್ಲಿ ವೇಶ್ಯೆಯರ ಮನೆಯಲ್ಲೂ, ಹಗಲೆಲ್ಲಾ ಹೋಟಲಿನಲ್ಲಿಯೂ ಕಳೆಯುತ್ತಾ ಬದುಕಿರತಕ್ಕ ಮನುಷ್ಯನಿಗಿಂತಲೂ, ನನ್ನ ಬಾಳು ಸ್ವಲ್ಪ ಮೇಲಾದುದಾಗುವುದು! ಅಷ್ಟೇ! ನೋಡಿರಿ! ಆ ಮನೆಯ ನರಸಿಂಗರಾಯರು, ಎಲ್ಲರೂ ಕಾಣುವಂತೆ ಮೂರು ಹೊತ್ತೂ ವೇಶ್ಯಾಗೃಹದಲ್ಲೇ ಕಾಲ ಕಳೆಯುತ್ತಿರುವರು! ಆದರೂ ಯಾರ ಮನೆಯಲ್ಲಾದರೂ ಸಮಾರಾಧನೆ ಯಾದರೆ, ಅವರಿಗೇನೇ ಮೊದಲಿನಸ್ಥಾನ! ಇದಕ್ಕೆ ಮಾತ್ರ ಸಮಾಜದ ಆಕ್ಷೇಪಣೆಯಿಲ್ಲ! ಇನ್ನು ಆ ಮನೆಯ ಭೀಮರಾಯರಿಗೆ, ಊಟ, ತಿಂಡಿ, ಸ್ನಾನಗಳೆಲ್ಲವೂ ಹೋಟೆಲಿನಲ್ಲಿಯೇ! ಹೋಟಲಿನ ಮಡಿಯು ನಿಮಗೆ ಗೊತ್ತೇ ಇರುವುದು. ಬ್ರಾಹ್ಮಣನಿಂದ ಹಿಡಿದು, ಆದಿಕನ್ನಡಿಗರು ಪೂರ್ತಾ ನೂರೆಂಟು ಜಾತಿಯವರೂ ಕಚ್ಚಿಕುಡಿದ, ಕಾಫಿಯ ಬಟ್ಟಲು, ತಟ್ಟೆಗಳನ್ನು, ಅಲ್ಲಿನ ಬ್ರಾಹ್ಮಣರು ಧಾರಾಳವಾಗಿ, ಸ್ವಲ್ಪವೂ ಸಂಕೋಚವಿಲ್ಲದೆ, ಗಂಟೆಗೆ ಐವತ್ತು ಸಾರಿ, ಕೈಯಾರ ತೆಗದುಕೊಂಡು ತೊಳೆದ ಶಾಸ್ತ್ರಮಾಡಿ, ಪುನಃ ಬ್ರಾಹ್ಮಣರಿಗೇನೇ ಅವುಗಳಲ್ಲಿ ಕಾಫಿ ತಿಂಡಿಯನ್ನು ತಂದಿಡುವರು. ಒಂದು ಸಾರಿ, ಆ ಎಂಜಲು ಸಮುದಾಯಗಳನ್ನು ಮುಟ್ಟಿದರೇನೇ, ಎಷ್ಟೋ ಗಂಗಾಸ್ನಾನ ಸೇತೂ ಸ್ನಾನಗಳನ್ನೂ ಮಾಡಬೇಕು! ಇಲ್ಲದಿದ್ದರೆ ಅವರಿಗೆ ಬ್ರಾಹ್ಮಣ್ಯವೇ ಇಲ್ಲವಲ್ಲ! ಇಂತಹುದರಲ್ಲಿ ಹಗಲು ರಾತ್ರಿಯಲ್ಲಿ ಅದರಲ್ಲೇ ಮುಳುಗಿ ತೇಲುವವನಿಗೆ ಬ್ರಾಹ್ಮಣ್ಯವೆಲ್ಲಿರಬೇಕು? ಅವನ ಕೈಯಲ್ಲಿ ಊಟ ಮಾಡುವವನಿಗೂ ಎಲ್ಲಿಂದ ಬ್ರಾಹ್ಮಣ್ಯವು ಬರಬೇಕು? ಇಂತಹವರೆಲ್ಲರೂ ಹುಟ್ಟಿನಲ್ಲಿ ಬ್ರಾಹ್ಮಣರೇ ಹೊರತು ಕರ್ಮತಃ ಬ್ರಾಹ್ಮಣರೇ! ಇವುಗಳಿಗೆಲ್ಲ ಸಮಾಜದ ಆಕ್ಷೇಪಣೆಗಳಿಲ್ಲ! ಸಾಲದ್ದಕ್ಕೆ ಇವರುಗಳಿಗೆ ಸಮಾಜವು ಧಾರಾಳವಾಗಿ ಮರ್ಯಾದೆಯನ್ನೂ ಮಾಡುತ್ತದೆ! ಹೀಗಿರುವಲ್ಲಿ ನೀವೇ ಹೇಳಿರಿ! ಸಮಾಜಕ್ಕೆ ಕಣ್ಣಿದೆಯೇ? ತಲೆಯಿದೆಯೇ? ಯುಕ್ತಾಯುಕ್ತ ವಿವೇಚನೆ

ಯುಂಟೇ? ಮತ್ತೂ ನೋಡಿರಿ! ಮೇಲ್ಕಂಡವರಿಬ್ಬರಿಗೂ ಸಮಾಜದಲ್ಲಿ ಅಷ್ಟಾಗಿ ಮಾತೇನೂ ಇಲ್ಲವೆಂಬುದು ನಿಮಗೆ ಗೊತ್ತೇ ಇದೆಯಷ್ಟೆ! ಈಗ ನಾನೇನಾದರೂ ನನ್ನ ಹೆಂಡತಿಯೊಡನೆ ಪುನಃ ಸಂಸಾರಮಾಡಲು ಆರಂಭಿಸಿದರೆ, ಆಗ ನೋಡಬೇಕು! ಸಮಾಜದ ಪೌರುಷವನ್ನು! ಬೀದಿ ಬೀದಿಯಲ್ಲೂ ನನ್ನ ಮಾತೇ! ನನ್ನ ಹೆಂಡತಿಯ ಮಾತೇ? ಯಾವಾಗಲೂ, ಎಲ್ಲರಿಗೂ ಇದೇ ಮಾತು! ಆದುದರಿಂದ ಇಂತಹ ಸಮಾಜವನ್ನೇ ನಾನು ಲೆಕ್ಕಕ್ಕೆ ತಾರದೆ, ಸ್ವತಂತ್ರನಾಗಿರಲು ಯೋಚಿಸಿರುತ್ತೇನೆ. ಆದರೆ ನೀವು ಕೇಳಬಹುದು, 'ನಿಮ್ಮ ಕಷ್ಟಸುಖಗಳಲ್ಲಿ ನಿಮ್ಮ ಮನೆಗೆ ಜನರು ಬಂದು ಹೋಗಬೇಕೋ ಇಲ್ಲವೋ?' ಎಂದು ನಿಜ! ದುಡ್ಡಿನ ಯೋಗ್ಯತೆಯೊಂದಿದ್ದರೆ ಸಾಕು! ಮಿಕ್ಕವುಗಳೆಲ್ಲವೂ ತಾನಾಗಿಯೇ ಬರುವುವು! ಅದೊಂದಿಲ್ಲದಿದ್ದರೆ ಮಾತ್ರ, ಉಳಿದ ಯಾವ ಯೋಗ್ಯತೆಗಳಿದ್ದರೂ ಉಪಯೋಗವಿಲ್ಲವಷ್ಟೆ! ಆದುದರಿಂದ ಇನ್ನು ನನಗೆ ಸಮಾಜದಿಂದ ಆಗಬೇಕಾದುದೇನೂ ಇಲ್ಲ! ನಾನೂ ಒಬ್ಬರ ಮನೆಗೂ ಹೋಗುವುದಿಲ್ಲ! ನನ್ನ ಮನೆಗೂ ಒಬ್ಬರೂ ಬರಬೇಕಾದುದಿಲ್ಲ! ನನಗೆ ಮಕ್ಕಳಿಲ್ಲವಾದುದರಿಂದ ಮದುವೆ ಮುಂಜಿಗಳ ರಗಳೆಯೂ ಇಲ್ಲ! ಇನ್ನು ನಮ್ಮಪ್ಪ ಅಮ್ಮನ ತಿಥಿಗಳ ವಿಷಯ: ನನ್ನ ಬಂಧುಜನಗಳ ಮನೆಗೆ ನಾನೊಬ್ಬನೇ ಹೋಗಿ, ಮಾಡಿಬಂದರಾಯ್ತು, ಅಥವಾ ಯಾವುದಾದರೂ ದೇವಸ್ಥಾನದಲ್ಲಿ ದುಡ್ಡುಕೊಟ್ಟು ಮಾಡಿದರಾಯ್ತು! ಇನ್ನು ಅವಳು ಮೊದಲು ಸತ್ತರೆ, ದುಡ್ಡಿನ ಬಲದಿಂದ ......... ಒಪ್ಪಮಾಡಿಸಬಲ್ಲೆ! ಅವಳು ಹೇಗೂ ಭ್ರಷ್ಟಳಾದುದರಿಂದ, ಯಾವ ಕ್ರಿಯೆಗಳೂ ಅವಳ ಪಾಪವನ್ನು ಹೋಗಲಾಡಿಸಲಾರವು! ಅವಳಿಗಿರುವ ಲೋಕಗಳು ಅವಳಿಗಿದ್ದೇ ಇರುವುವು! ಇನ್ನು ನಾನೇ ಮೊದಲು ಸತ್ತರೂ ನನಗೂ ಅದೇ ಗತಿಯೆನ್ನುವುದು ನಿಷ್ಕರ್ಷೆಯೇ ಆಗಿದೆ" ಎಂದರು

ಇದೆಲ್ಲವನ್ನೂ ಕೇಳಿ, ಅಂತೂ ರಾಯರು ‘ **ಅದನ್ನೇ ಉಂಡೇನು ! ಕಪತೆಗಿ !** ’ ಎನ್ನುವವರ ಗುಂಪಿಗೇ ಬಂದರೆಂದುಕೊಂಡೆ ! ಆದರೂ ರಾಯರ ಬುದ್ಧಿಯನ್ನೂ ಅವರ ವಿವೇಚನೆಯ ಮಾತುಗಳನ್ನೂ ಕೇಳಿ ಸಂತೋಷವಾಯಿತು. ಅದರಲ್ಲಿಯೂ ಅವರು, ತಮ್ಮ ಸ್ವರೂಪವನ್ನೂ ಸಹ ಸ್ಪಷ್ಟವಾಗಿ ಹೇಳಿದ್ದರಿಂದ ಅವರ ವಿಷಯದಲ್ಲಿ ನನಗೆ ಇನ್ನೂ ಕನಿಕರವೂ ಆದರವೂ ಉಂಟಾದುವು. ಆಗ ನಾನು ಹೇಳಿದೆ, ‘ ರಾಯರೇ, ನೀವಂದ ಮಾತುಗಳೆಲ್ಲವೂ ಅಕ್ಷರಶಃ ನಿಶ್ಚಯವೇ. ಒಂದೂ ಸುಳ್ಳಿಲ್ಲ ! ಆದರೆ, ಒಂದು ಮಾತು ! ಸಾಮಾನ್ಯವಾಗಿ ಸಮಾಜವು, ಯಾರಿಗೂ ಸಹಾಯ ಮಾಡದಿದ್ದರೂ ಯಾರನ್ನೂ ಹೊಗಳದಿದ್ದರೂ, ಎಲ್ಲರ ದೋಷಗಳನು ಎತ್ತಿಹಾಕಿ, ಜನಗಳ ನಡತೆಯನ್ನು ತಿದ್ದಲು ಪ್ರಯತ್ನಪಡುತ್ತದೆ ! ಆದರೆ, ಅದರಲ್ಲಿ ವಿಶೇಷವೇನೆಂದರೆ, ಬಡವರ ದೋಷಗಳು ಹೊರಕ್ಕೆ ಬರುವಷ್ಟು ಸುಲಭವಾಗಿ, ದೊಡ್ಡವರ (ಹಣವಂತರ) ದೋಷಗಳು ಹೊರಕ್ಕೆ ಬರುವು ದಿಲ್ಲ ! ಇದಕ್ಕೆ ಕಾರಣವು ಸಮಾಜಕ್ಕೆ ಪಕ್ಷಪಾತವೆಂದು ತಿಳಿಯಬೇಡಿ ! ಆದರೆ ಅಷ್ಟು ನಿಸ್ಪೃಹತೆಯಿಲ್ಲದಿರುವುದೇ ! ಕಾರಣ ! ಸಮಾಜವು ದೊಡ್ಡ ವರ ದುಡ್ಡಿಗೆ ಅಡಿಯಾಳಾಗಿರುವುದೇ ಕಾರಣ ! ಅಂತೂ ಹೇಗೋ ಯಾವ ಕಾರಣದಿಂದಲೋ—ನಾವೂ ಸಮಾಜಕ್ಕೆ ಒಳಪಟ್ಟು ನಡೆಯಲೇ ಬೇಕಾ ಗಿದೆ ! ಯತ್ನವಿಲ್ಲ ! ಆದರೆ ನಿಮ್ಮ ವಿಷಯದಲ್ಲಿ ಮಾತ್ರ ಒಂದು ಮಾತು ! ನಿಮಗೆ ಬೇರೆ ಯಾವ ಅನುಕೂಲತೆಗಳೂ ಇಲ್ಲವಾದುದರಿಂದ ಮತ್ತಾರೂ ಪಾಲಕರು ಇಲ್ಲವಾದುದರಿಂದ ನಿಮ್ಮ ಅಭಿಪ್ರಾಯದಂತೆ ನಿಮ್ಮ ಹೆಂಡತಿಯೇ ಬಂದು, ನಿಮ್ಮ ಕ್ಷಮೆಬೇಡಿ ಶರಣುಹೊಕ್ಕರೆ, ಅಗತ್ಯವಾಗಿ ಸೇರಿಸಿಕೊಳ್ಳಿರಿ ! ಕಾಲವು ಹೀಗೆಯೇ ಇರುವುದಿಲ್ಲವಷ್ಟೆ ! ಅವಳಿಗಾದರೂ ತನ್ನ ತಪ್ಪು ತೋರಿ ಪಶ್ಚಾತ್ತಾಪವುಂಟಾಗಬಹುದು ! ಅದರಿಂದಲೇ ಅವಳ ಪಾಪ

ರಾಶಿಯೂ ಕಡಮೆಯಾಗುವುದು. ಆದುದರಿಂದ ಮುಂದೆಂದೂ ಅವಳು ಅಂತಹ ಕೆಲಸಮಾಡದೆ ನಿನಗೆ ವಿಧೇಯಳಾಗಿ ನಡೆದುಕೊಳ್ಳಬಹುದು! ಸಮಾಜವು ನಿಮಗೆ ಸಹಾಯಮಾಡಿದರೆ ಮಾಡಲಿ! ಬಿಟ್ಟರೆ ಬಿಡಲಿ! ದೇವರು ನಿಮಗೆ ಒಳ್ಳೆಯದು ಮಾಡಲಿ! ನಿಮ್ಮ ಹೆಂಡತಿಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ! ಸುಖವಾಗಿರಿ! ಹೊತ್ತಾಯಿತು! ಬರುತ್ತೇನೆ" ಎಂದು ಹೇಳಿ ಮನೆಗೆ ಹೊರಟುಬಂದೆನು.

ಇತ್ತಲಾಗಿ, ಆ ರಾತ್ರಿಯಲ್ಲಿ ಮನೆಯನ್ನು ಬಿಟ್ಟುಹೊರಟ ನಮ್ಮ ರಾಯರ ಹೆಂಡತಿಯು ಎಲ್ಲಿಗೆ ಹೋಗಬೇಕೆಂದಿದ್ದಳೋ ಅಲ್ಲಿಗೆ ಹೋದಳು! ಪುಣ್ಯಕ್ಕೆ ಆ ದಿವಸ ಅವನ ಹೆಂಗಸು, ತೌರುಮನೆಯ ಮದುವೆಗೆ ಹೋಗಿದ್ದಳು. ಅವನೂ ಸಹ ಒಂದೆರಡು ದಿನಗಳು ಹೋಗಿಬಂದಿದ್ದನು. ಇನ್ನೆಲ್ಲಾ ನಾಲ್ಕು ದಿನಗಳೊಳಗಾಗಿ, ಅವನ ಹೆಂಗಸು ತೌರುಮನೆಯಿಂದ ಬರುವವಳಾಗಿದ್ದಳು. ಇಂತಹ ಸ್ಥಿತಿಯಲ್ಲಿ, ರಾಯರ ಹೆಂಡತಿಯು ಅಲ್ಲಿಗೆ ಬಂದದ್ದನ್ನು ನೋಡಿ, ಅವನಿಗೆ ಗಾಬರಿಯಾಯಿತು! ಎಲ್ಲವನ್ನೂ ಕೇಳಿದ! ಯೋಚಿಸಿದ! 'ಸರಿಸರಿ! ಚೆನ್ನಾಯಿತು! ಚೆನ್ನಾಯಿತು! ಇಷ್ಟು ದಿವಸ ಯಾವನೋ ಒಬ್ಬನು ಇವಳಿಗೆ, ಅನ್ನ ಬಟ್ಟೆ, ಒಡವೆ ವಸ್ತ್ರಗಳನ್ನು ಕೊಟ್ಟು ಇವಳ ಭಾರವನ್ನೆಲ್ಲ ಹೊತ್ತಿದ್ದನು! ಆದುದರಿಂದ ನನಗೆಲ್ಲೋ ಸ್ವಲ್ಪ ಮಟ್ಟಿನ ಭಾರ ಮಾತ್ರವಿತ್ತು! ಈಗ ಇವಳ ಎಲ್ಲಾ ಭಾರವನ್ನೂ ನಾನೇ ವಹಿಸಬೇಕು! ಆದಾರಿಗೆಬೇಕು ಈ ಹಿಂಸೆ? ನನ್ನ ಪಾಡಿಗೆ ನಾನು ಸುಖವಾಗಿರದೆ, ನನಗೇಕೆ ಈ ಶನಿಯ ಕಾಟ? ಇರಲಿ, ಹೇಗೂ ಇನ್ನೆರಡು ಮೂರು ದಿನಗಳು ನನ್ನ ಹೆಂಡತಿ ಇಲ್ಲಿಲ್ಲವಾದುದರಿಂದ, ಇವಳಿಲ್ಲಿಯೇ ಇರಲಿ, ಆ ಮೇಲೆ ಇವಳಿಗೆ ಮೂರು ಬೆರಳೇ! ಅವಳು ಅವಳೇ! ನಾನು ನಾನೇ!'

ಎಂದುಕೊಂಡು, ಮೂರು ದಿನಗಳ ಮೇಲೆ, ಬೇಕೆಂತಲೇ ಮಾತಿಗೆ ಮಾತು ಹತ್ತಿಸಿ, ಯದ್ವಾತದ್ವಾ ಅಂದು, ರಾತ್ರಿ ತೊಲಗಿಸಿಬಿಟ್ಟನು.

ಈಗ ಗೊತ್ತಾಯಿತು ರಾಯರ ಹೆಂಡತಿಗೆ! ಕೈಹಿಡಿದ ಗಂಡನ ಯೋಗ್ಯತೆ ಎಷ್ಟು? ಇನ್ನೊಬ್ಬನ ಯೋಗ್ಯತೆ ಎಷ್ಟು? ಎಂದು ಬುದ್ಧಿ ಬಂದಿತು! ಅತ್ತಳು! ಕರೆದಳು! ಕೆರೆ, ಕೊಳಬಿದ್ದು ಪ್ರಾಣಬಿಡಲೆ ಯೆಂದು ಯೋಚಿಸಿದಳು! ಆದರೆ ಯಾರಿಗೆತಾನೆ, ಪ್ರಾಣಬಿಡುವುದು ಸುಲಭದಲ್ಲಿಸಾಧ್ಯ? ಎಷ್ಟಾದರೂ ಅದು ಬಹಳ ಕಟ್ಟಕಡೆಯದಲ್ಲವೇ? ಏನೂ-ಯಾವ ದಾರಿಯೂ-ಸಾಧ್ಯವಾಗದಿದ್ದರೆ ತಾನೇ ಅದನ್ನ ಕೈಗೊಳ್ಳು ವುದು? ಆದುದರಿಂದ ಪುನಃ ಯೋಚಿಸಿದಳು! "ಏನುಮಾಡಲಿ! ಪ್ರಾಣ ಬಿಡುವುದಕ್ಕೂ ಮನಸ್ಸು ಬರುವುದಿಲ್ಲವಲ್ಲ! ಎಲ್ಲಿಹೋಗಲಿ! ಪುನಃ ನನ್ನ ಮನೆಗೇ ಹೋಗಲೇ? ಅವರಕಾಲಿಗೆ ಬಿದ್ದು ಕ್ಷಮಾಪಣೆ ಕೇಳಿಕೊಳ್ಳಲೆ, ಹೌದು; ಆದರೂ ಅವರು ಸೇರಿಸುವುದಿಲ್ಲವೆಂದು ಹೇಳಿದರೋ? ಅವಮಾನ ವೇನೂಯಿಲ್ಲವಷ್ಟೆ! ಆಗೇನುಮಾಡುವುದು? ಮಾಡುವುದೇನು? ಕೊನೆಗೆ ಕೆರೆಕೊಳಗಳ ಪಾಲಾಗುವುದೇಸರಿ! ಆದರೆ, ಬೆಳಗಾಗುತ್ತಲೂ, ಅವರಿವರು ಎಲ್ಲಿಗೆ ಹೋಗಿದ್ದೆಯೆಂದು ಕೇಳಿದರೆ, ಏನುಹೇಳುವುದು? ಹೇಳುವುದೇನು? ಚಿಕ್ಕಮ್ಮನ-ದೊಡ್ಡಮ್ಮನ ಮನೆಗೆ ಹೋಗಿದ್ದೆನೆಂದರಾಯಿತು! ಮೇಲಾಗಿ, ಯಾರಲ್ಲಿಯೂ ಮಾತಿಗಾಗಲಿ ಯಾರಮನೆಗಾಗಲಿ, ಹೋಗಲೇಬಾರದು? ಬಾಗಿಲುಹಾಕಿಕೊಂಡು ಸದಾ ಮನೆಯಲ್ಲಿಯೆಯಿದ್ದು ಬಿಡುವುದು!" ಎಂದು ಮುಂತಾಗಿ ನಿರ್ಧರಿಸಿ ಕೊಂಡು, ರಾತ್ರಿ 11 ಘಂಟೆಯವೇಳೆಯಲ್ಲಿ ರಾಯರ ಮನೆಯಬಾಗಿಲಿಗೆ ಬಂದು ಬಾಗಿಲನ್ನು ತಟ್ಟಿ 'ಬಾಗಿಲು' ಎಂದಳು.

ಈ ಧ್ವನಿಯನ್ನು ಕೇಳಿ, ನಾನು 'ಇದುರಾಯರ ಹೆಂಡತಿಯ ಸ್ವರ, ವೆಂದು ತಿಳಿದು, ಗಾಜಿನ ಕಿಟಕಿಯಿಂದ, ರಾಯರ ಮನೆಯ ಬಾಗಿಲನ್ನು

ನೋಡಿದೆನು. ರಾಯರ ಹೆಂಡತಿಯು 'ಅದನ್ನೇ ಉಂಡೇನು! ಕದತೆಗಿ!' ಎನ್ನುವಂತೆ ಇನ್ನೂ ಬಾಗಿಲನ್ನು ತಟ್ಟುತ್ತಲೇ ಇದ್ದಳು. ನಾಲ್ಕೈದು ಸಾರಿ ತಟ್ಟಿದ ಮೇಲೆ, ರಾಯರಿಗೆ ಎಚ್ಚರವಾಗಿ, 'ಅದಾರೆಂದರು.' ಕೂಡಲೇ ರಾಯರ ಹೆಂಡತಿಯು, 'ನಾನು' ಎನ್ನಲು, ರಾಯರು ಧ್ವನಿಯನ್ನು ಗುರುತಿಸಿ, ಬಾಗಿಲನ್ನು ಹಿಂದಕ್ಕೆ ತೆರೆಯುತ್ತಾ, 'ತೊಲಗು, ನಾಚಿಕೆಯಿಲ್ಲದೆ ಮತ್ತೇಕೆ ಬಂದೆ? ಇಷ್ಟು ದಿನಗಳು ಎಲ್ಲಿದ್ದೆಯೋ ಅಲ್ಲಿಗೆ ಹೋಗೆಂದರು!' ಅಷ್ಟೆ! ಅವಳನ್ನು ನೂಕಲೂ ಇಲ್ಲ! ಬಾಗಿಲನ್ನು ಹಾಕಿಕೊಳ್ಳಲೂ ಇಲ್ಲ! ಈ ಸ್ಥಿತಿಯನ್ನು ನೋಡಿ ನನಗೆ ನಗುಬಂದಿತು! ಕೂಡಲೇ ರಾಯರ ಹೆಂಡತಿಯು ರಾಯರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅದರ ಮೇಲೆ ತನ್ನ ತಲೆಯನ್ನಿರಿಸಿ ಕಣ್ಣೀರಿನಿಂದ ಕಾಲುಗಳನ್ನು ತೊಳೆದಳು! ನಾನಾ ವಿಧವಾಗಿ ಕ್ಷಮಾಪಣೆಯನ್ನು ಬೇಡಿಕೊಂಡಳು! ಪಾಪ ರಾಯರು ನೋಡಿದರು! ಅವರಿಗೂ ಕಣ್ಣಿನಲ್ಲಿ ಎರಡು ತೊಟ್ಟು ನೀರು ಬಂದಿತು!............ ಈಗ ರಾಯರ ಹೆಂಡತಿಗೆ ಚನ್ನಾಗಿ ವಿವೇಕ ಬಂದಿದೆ! ರಾಯರಿಗೂ ಈಗ ಮೊದಲಿಗಿಂತಲೂ, ಮನೋನೆಮ್ಮದಿಯಿಂದ, ಉತ್ಸಾಹವು ಹೆಚ್ಚಾಗಿದೆ. ಈಗ ಗಂಡ ಹೆಂಡರಿಬ್ಬರೂ ಅನ್ಯೋನ್ಯವಾಗಿರುತ್ತಾರೆ! ಇರಲಿ! ಹೀಗೆಯೇ ಇನ್ನೂ ಸಾವಿರಕಾಲವಿರಲಿ!! ನೀವೂ ಸುಖವಾಗಿರಿ!!!

## ೫ ನೆಯ ಪ್ರಕರಣ

ಒಂದು ದಿನ ಬೆಳಿಗ್ಗೆ ನಮ್ಮ ರಾಮುವಿಗೆ, ಎಣ್ಣೆನೀರು ಹಾಕಬೇಕಾಯಿತು. ಆದರೆ, ನೀರುಹಾಕುವುದು ಸ್ವಲ್ಪ ಹೊತ್ತಾದುದರಿಂದ, ಬೆಳಿಗ್ಗೆ ಎಂಟು ಘಂಟೆಯಾಗಿ ಹೋಯಿತು, ಆಗ ರಾಮುವು 'ಅಪ್ಪಾ ಸ್ಕೂಲಿಗೆ ಹೋಗಲು ಹೊತ್ತಾಗಿ ಹೋಯಿತು! ಹೊತ್ತಾಗಿ ಹೋದವರನ್ನು ಮಾಸ್ಟರು (ಉಪಾಧ್ಯಾಯರು) ಹತ್ತು ಘಂಟೆಯವರೆಗೂ ನಿಲ್ಲಿಸಿಬಿಡುತ್ತಾರೆ, ಅದುದರಿಂದ, ನೀನು ಬಂದು ಸ್ಕೂಲಿನಲ್ಲಿ ಮಾಸ್ಟರಿಗೆ ನನ್ನನ್ನು ನಿಲ್ಲಿಸದಂತೆ

ಹೇಳುವುದಾದರೆ, ನಾನು ಸ್ಕೂಲಿಗೆ ಹೋಗುತ್ತೇನೆ! ಅಲ್ಲವಾದರೆ ಹೋಗುವುದೇಯಿಲ್ಲ' ವೆಂದನು ನನಗೂ, ಅವನು ಹೇಳಿದುದು ನ್ಯಾಯವಾಗಿ ತೋರಿಬಂದುದರಿಂದ, 'ಹಾಗೆಯೇ ಆಗಲೆಂದು' ಹೇಳಿ, ಸ್ಕೂಲಿಗೆ ಅವನನ್ನು ಕರೆದು ಕೊಂಡು ಹೋಗಿ, ಮಾಸ್ಟರಿಗೆ 'ನನ್ನ ಮಗನು ಹೊತ್ತಾಗಿ ಬಂದುದರ ಕಾರಣವನ್ನು ಹೇಳಿ, ದಯವಿಟ್ಟು ಅವನನ್ನು ನಿಲ್ಲಿಸಬಾರದಾಗಿ' ಕೇಳಿಕೊಂಡೆನು. ಅವರು 'ಹಾಗೆಯೇ ಆಗಲೆಂದು' ಹೇಳಿ ನನಗೊಂದು ಸ್ಟೂಲನ್ನು (Stool-ಕಾಲುಮಣೆ) ತೋರಿಸಿ, ಕೂರುವಂತೆ ಹೇಳಿದರು. ಅಲ್ಲಿದ್ದ ಹುಡುಗರೆಲ್ಲರೂ ಸ್ವಲ್ಪ ಹೆಚ್ಚು ಕಡಮೆ ಆರೇಳುವಯಸ್ಸಿನವರೇನೆ? ಒಟ್ಟು ಐವತ್ತೇ ಹುಡುಗರಿದ್ದರು ಮಾಸ್ಟರು, ಕೆಲವರಿಗೆ ಅಕ್ಷರ ಕೆಲವರಿಗೆ ಪಾಠ.............. ಈ ರೀತಿಯಾಗಿ ಹೇಳಿ ಕೊಡುತ್ತಿದ್ದರು. ನನಗೂ ಅಲ್ಲೇ ಸ್ವಲ್ಪ ಹೊತ್ತಿದ್ದು ತಮಾಷೆ ನೋಡಬೇಕೆನ್ನಿಸಿತು ಅಷ್ಟರಲ್ಲಿ ಒಬ್ಬ ಹುಡುಗನು, ಮೇಲಕ್ಕೆದ್ದು ಹಿಂದುಗಡೆಗೆ ತನ್ನ ಎಡಗೈಯನ್ನು ನೀಡಿ, ಆಸನದ್ವಾರವನ್ನು ಎತ್ತಿ ಹಿಡಿದುಕೊಂಡು, ಸಾರ್ ಸಾರ್ ಬಲು ಅವಸರ.... ಹೋಗಬೇಕು!...........ಬಿಟ್ಟಿತು ಎಂದು ಬಲಗೈಯ ಎರಡು ಬೆಟ್ಟನ್ನು ತೋರಿಸುತ್ತ ಮಾಸ್ಟರ ಎರಡು ಕಣ್ಣುಗಳಿಗೆ ಸರಿಯಾಗಿ ನೀಡಿದನು ಆದರೆ ಪುಣ್ಯಕ್ಕೆ ಮಾಸ್ಟರ ಕಣ್ಣಿಗೆ ಚುಚ್ಚಲಿಲ್ಲ! ಇದನ್ನು ನೋಡಿ ನನಗೆ ನಗು ಬಂದಿತು. ಮಾಸ್ಟರು ಅವನನ್ನು ಬೈದು ಕಳುಹಿಸಿದರು. ಅಷ್ಟರೊಳಗೆ ಇನ್ನೊಬ್ಬನೆದ್ದು 'ಸಾರ್ ಒಂದಕ್ಕೆ' ಎಂದು ಹೇಳಿ ತನ್ನ ಬಲಗೈಯ ಒಂದು ಬೆರಳನ್ನು ತೋರಿಸುತ್ತ, 'ಇಗೋ ನನ್ನ.......ಆಗಲೆ ಸ್ವಲ್ಪನೆಂದು ಹೋಯಿತು' ಎಂದನು. ಅವನನ್ನೂ ಬಿಟ್ಟರು. ಎರಡು ನಿಮಿಷಗಳ ನಂತರ ಮತ್ತೊಬ್ಬನು ಕೇಳಲು ಮಾಸ್ಟರಿಗೆ ರೇಗಿ, ಅವನಿಗೆ ಎರಡೇಟುಗಳನ್ನೂ ಕೊಟ್ಟರು. ಬಿಡಲೂ ಇಲ್ಲ ಅವನು "ಇರಲಿ ಇವರಿಗೆ ತಕ್ಕದ್ದನ್ನು ಮಾಡುವೆನೆಂದುಕೊಂಡ" ಹಲಗೆಯ ಮೇಲೆಲ್ಲ ಬೇಕೆಂತೆ.......... ಬಿಟ್ಟ

ಇದನ್ನು ನೋಡಿದರು ! ಮಾಸ್ಟರು ! ಕೈ ಕೈ ಹಿಸಿಕಿಕೊಂಡರು, ಸಾಕಪ್ಪ ಸಾಕೋ ಎಂದರು. ಆ ಹುಡುಗನಿಗೆ ಮತ್ತೆರಡು ಏಟುಗಳನ್ನು ಬಿಗಿದರು. 'ಈ ಹಾಳು ಹುಡುಗರು ಬಾರದಿದ್ದರೇನಾಗುತ್ತಿತ್ತೆಂದು' ಕೊಂಡರು. ಅಷ್ಟರೊಳಗೆ ನಾಲ್ಕು ಹುಡುಗರು ಮುಂದಕ್ಕೆ ಬಂದರು, ಅವರಲ್ಲಿ ಒಬ್ಬನು 'ಸಾರ್ ಸಾರ್ ಇವನು ನನ್ನ ಸ್ಲೇಟನ್ನು ಗೀಜಿದ' ನೆಂದ! ಇನ್ನೊಬ್ಬನು 'ಸಾರ್ ಅವನು ನನ್ನನ್ನು ನಿನ್ನ ಅವ್........ಎಂದು ಬೈದನೆಂದ! ಮತ್ತೊಬ್ಬನು ಸಾರ್ ! ಇವನು ನನ್ನ ತೊಡೆ ಜಿವುಟದನೆಂದ! ಮಗದೊಬ್ಬನು, 'ಸಾರ್ ಇವನು ನನ್ನ ಪುಸ್ತಕವನ್ನು ಹರಿದ' ನೆಂದನು. ಇವುಗಳನ್ನು ನೋಡಿ, ಮಾಸ್ಟರ ಸಿಟ್ಟು ಪರಮಾವಧಿಗೆ ಏರಿತು! ಒಬ್ಬೊಬ್ಬನಿಗೆ ಒಂದೊಂದೇ ಏಟನ್ನು ಕೊಟ್ಟರು ! ಅದೂ ಎಂಟಾಣೆಗೊಂದರ ಏಟು! ಹಾಗೆ ಏಟುಬಿದ್ದ ಹತ್ತು ನಿಮಿಷಗಳವರೆಗೂ, ತರಗತಿಯೆಲ್ಲವೂ ನಿಶ್ಯಬ್ದವಾಗಿತ್ತು! ಮಾಸ್ಟರಿಗೂ ನನಗೂ ಸಮಾಧಾನವಾಗಿತ್ತು ! ಪುನಃ ಆರಂಭವಾಯಿತು ! ಗಲಾಟೆಗೆ! ಅಷ್ಟರಲ್ಲಿ ಒಂಭತ್ತು ಘಂಟೆಯಾದುದರಿಂದ, ಹುಡಗರನ್ನೆಲ್ಲಾ ಹೊರಕ್ಕೆ ಬಿಟ್ಟರು.

ನಾನು ಮಾಸ್ಟರನ್ನು 'ನಿಮಗೂ ಈ ಹುಡುಗರಲ್ಲಿ ಬೇಯುವುದು ಕಷ್ಟ ಅವರಿಗೂ ಈ ನಿರ್ಬಂಧದ ಸ್ಕೂಲಿನಲ್ಲಿ ಬಾಳುವುದು ಕಷ್ಟ' ಎಂದೆ. ಅವರಂದರು 'ನಿಜ ನಿಮ್ಮ ಮಾತಿನಂತೆ, ನನಗೆ ಎಷ್ಟೋವೇಳೆಗಳಲ್ಲಿ ತಲೆನೋವೆ ಬಂದಿರುವುದುಂಟು. ಈ ಹಾಳು ಹೊಟ್ಟೆಗೋಸ್ಕರ ಯಾವುದಾದರೂ ಒಂದು ರೀತಿಯಲ್ಲಿ ಕಷ್ಟಪಟ್ಟೇತೀರಬೇಕು! ನಮಗೆ ಯಾವ ಹುಡುಗನಲ್ಲಿಯೂ ದ್ವೇಷವಿಲ್ಲ! ಆದರೆ ಏನು ಮಾಡೋಣ? ಅವರ ಸ್ವಭಾವಕ್ಕೆ ತಕ್ಕಂತೆ ಅವರು ಚೇಷ್ಟೆಮಾಡುವರು. ನಮಗೋ ಸಹಿಸುವುದಿಲ್ಲ! ಶಿಕ್ಷಿಸುತ್ತೇವೆ!

ಅಳುತ್ತಾರೆ! ಆಗ ನಮಗೂ ಸ್ವಲ್ಪ ವ್ಯಸನವಾಗುತ್ತದೆ! ಹೀಗೆಂದು ಹೇಳಿ ಶಿಕ್ಷಿಸದೆ ಸುಮ್ಮನಿರುವುದಕ್ಕೂ ಆಗುವುದಿಲ್ಲ! ಏನು ಮಾಡುವುದು? ಯತ್ನವಿಲ್ಲ. ಹೀಗಾಗಿ ನಮಗೂ-ಹುಡುಗರಿಗೂ, ಸ್ಕೂಲಿಗೆ ಬಂದರೆ, ದೇವರೇ, ಎಷ್ಟುಹೊತ್ತಿಗೆ ಹತ್ತೂವರೆ ಘಂಟೆಯಾಗುತ್ತದೆಂತಲೇ ಕಾದಿರುತ್ತೇವೆ. ಪುನಃ ಮಧ್ಯಾಹ್ನವೂ ಇದೇ ಹಾಡು! ಒಂದುವೇಳೆ 15-20 ಹುಡುಗರಿದ್ದರೆ, ಏನೋ ಒಂದು, ಈಗ್ಗಿಂತಲೂ ಅನುಕೂಲವಾದ ರೀತಿಯಲ್ಲಿರಬಹುದು. ಈಗಲೋ ಹಾಗಲ್ಲ ಇದಕ್ಕೆರಡರಷ್ಟು ಮೂರರಷ್ಟು ಹುಡುಗರು! ಎಷ್ಟು ಹೇಳಿಕೊಂಡರೂ ಮೇಲಿನವರು ಕಿವಿಗೆ ಹಾಕಿಕೊಳ್ಳುವುದಿಲ್ಲ. ಹಾಗೂ ಪದೇಪದೇ ಬರೆದರೆ 'ನಿಮನ್ನ ವಜಾ (ಡಿಸ್ಮಿಸ್) ಮಾಡುತ್ತೇವೆ, ನಿಮ್ಮಂತಹವರು ನೂರಾರು ಮಂದಿ' ಎಂಬುದೇ ಉತ್ತರ ನಮಗೂ ಹುಡುಗರಿಗೂ ಪರಸ್ಪರ ಬೇರೆಗತಿಯಿಲ್ಲ ಅವರಿಗೆ ಬೇಕಿಲ್ಲ! ಏನು ಮಾಡೋಣ ಹೀಗೆಯೇ ವಿಷಕ್ರಿಮಿನ್ಯಾಯದಿಂದ ನಡೆಯುತ್ತಿರಲೇಬೇಕು ಎಂದರು. ನಾನು ಕೇಳಿದೆ 'ಮೇಷ್ಟರೇ! ಸ್ನೇಹಧರ್ಮದಲ್ಲಿ ನಿಮ್ಮನ್ನು ಒಂದು ಮಾತು ಕೇಳುತ್ತೇನೆ ಅಧಿಕಾರದಿಂದೆಂದು ತಿಳಿಯಬೇಡಿರಿ! ಜಲಮಲಗಳನ್ನು ತಡೆಯಬಾರದೆಂಬುದು ಆರೋಗ್ಯಶಾಸ್ತ್ರದ ನಿಯಮವಷ್ಟೆ! ಆದುದರಿಂದ, ಹುಡುಗರು ಅದಕ್ಕೋಸ್ಕರವೆಂದು ಕೇಳಿದಾಗ, ಅವರನ್ನು ಸ್ವಲ್ಪವೂ ಶಿಕ್ಷಿಸದೆ, ಹೊರಕ್ಕೆ ಬಿಡುವುದು ನ್ಯಾಯವಲ್ಲವೆ?' ಎಂದೆನು.

ಅದಕ್ಕೆ ಮಾಸ್ಟರು, 'ನೀವು ಹೇಳಿದುದೆಲ್ಲವೂ ನಿಜವೇನೇ! ಆದರೆ ಅದೇ ಆರೋಗ್ಯ ಶಾಸ್ತ್ರದಲ್ಲಿ, ಮತ್ತೊಂದು ನಿಯಮ ವಿರುವುದೂ ನಿಮಗೆ ಗೊತ್ತಿರಬೇಕಷ್ಟೆ! ಪ್ರತಿ ನಿಮಿಷವೂ ಮೂತ್ರವು ಉತ್ಪತ್ತಿಯಾಗುತ್ತಿದ್ದರೂ ಒಂದುಸಾರಿ ಬರಿದಾದ, ಮೂತ್ರಕೋಶವು ಪುನಃ ತುಂಬಲು ಕೊನೆಯ ಪಕ್ಷ ಮೂರು ಘಂಟೆಯಕಾಲವಾದರೂ ಬೇಕಲ್ಲವೇ? ಹೋಗಲಿ, ಜೇಡ! ಕೊನೆಗೆ

ಎರಡು ಘಂಟೆಗಳ ಕಾಲಕ್ಕಿಂತಲೂ ಮುಂಚೆ ಖಂಡಿತವಾಗಿಯೂ ಕೋಶವು ತುಂಬಿ ಜಲಬಾಧೆಗೆ ಅವಸರವಾಗುವುದಿಲ್ಲವಷ್ಟೆ? ಆದುದರಿಂದ, ನಾನು, ಸಾಧ್ಯವಾದ ಮಟ್ಟಿಗೂ ಈ ತೊಂದರೆಯನ್ನು ನಿವಾರಿಸ ಬೇಕೆಂದು, ಬೆಳಿಗ್ಗೆ ಹುಡುಗರೆಲ್ಲರೂ ತರಗತಿಗೆ ಬರುವಾಗಲೇ ಎಲ್ಲರೂ ಜಲಬಾಧೆ ತೀರಿಸಿಕೊಂಡು ಬರಲು ಏರ್ಪಡಿಸಿರುತ್ತೇನೆ. ಮಧ್ಯಾಹ್ನವೂ ಹಾಗೆಯೇ! ಆದುದರಿಂದ ಈ ನಿಯಮದಂತೆ, $7\frac{1}{2}$ ಘಂಟೆಗೂ 9 ಘಂಟೆಗೂ ನಡುವೆ $1\frac{1}{2}$ ಘಂಟೆಕಾಲ ಮಾತ್ರವಾದುದರಿಂದ, ಒಟ್ಟಿನಲ್ಲಿ, ಯಾವ ಹುಡುಗನೂ ಜಲಭಾಧೆಗೆ ಹೋಗ ಬೇಕಾದುದಿಲ್ಲ. ಇನ್ನು ಹಾಗೂ ಯಾವನಾದರೂ ಒಬ್ಬ ಹುಡುಗನು ಅಕ ಸ್ಮಾತ್ತಾಗಿ ಜಲಬಾಧೆಗೆ ಹೋಗಲೇ ಬೇಕಾದರೆ, ಇಲ್ಲವೇ ಅವನಿಗೆ ಬಹು ಮೂತ್ರದ ( iabetes) ರೋಗಬರಬೇಕು, ಅಥವಾ ಬೆಳಿಗ್ಯೆ ಅವನು ಜಲಬಾಧೆಗೆ ಹೋಗಿ ಬಾರದವನಾಗಿರಬೇಕು, ಅಥವಾ ಹೊರಗೆ ಆಟ ವಾಡಲು, ಜಲಬಾಧೆಯ ನೆಪಮಾಡಿಕೊಂಡು ಹೋಗುವವನಾಗಿರಬೇಕು. ಆದುದರಿಂದ, ಈ ಎಲ್ಲಕಾರಣಗಳಿಂದಲೂ, ಈ ತರಗತಿಯು ನಮ್ಮ ಚಿರಕಾ ಲದ ಅನುಭವದಿಂದಲೂ, ಯಾವ್ಯಾವ ವೇಳೆಗಳಲ್ಲಿ, ಯಾವ್ಯಾವ ಹುಡುಗನ ವಿಷಯದಲ್ಲಿ, ಹೇಗೆಹೇಗೆ ನಡೆದು ಕೊಳ್ಳ ಬೇಕೆಂದು, ಯೋಚಿಸಿ, ಅದಕ್ಕೆ ತಕ್ಕಂತೆ ನಡೆದು ಕೊಳ್ಳುತ್ತೇವೆ, ಹಾಗಿಲ್ಲದೆ ಹುಡುಗರು ಕೇಳಿದಂತೆಲ್ಲ ವಿವೇಚನೆಯಿಲ್ಲದೆ ಬಿಡುತ್ತಬಂದರೆ, ನಾವು ಬೇರೆ, ಯಾವಪಾಠವನ್ನೂ ನಡೆ ಸುವಂತೆಯೇಯಿಲ್ಲ! ಇನ್ನು ಮಲಬಾಧೆಯ ವಿಷಯದಲ್ಲಿ ದೇಹಪ್ರಕೃತಿಯು ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿರುವುದರಿಂದ, ಒಂದು ನಿಯಮವನ್ನು ಏರ್ಪಡಿಸುವುದು ಕಷ್ಟ! ಆದುದರಿಂದ ಸಾಧ್ಯವಾದ ಮಟ್ಟಿಗೂ ಮಲಬಾ ಧೆಗೆ ಕೇಳಿದವರನ್ನು ಬಿಟ್ಟು ಬಿಡುತ್ತೇನೆ’ ಎಂದರು.

ನಾನು ಕೇಳಿದೆ "ಏನುಸ್ವಾಮಿ! ಇತ್ತಿತ್ತಲಾಗಿ ಕೆಲವರು ದೊಡ್ಡ ದೊಡ್ಡವರು, 'ಮಕ್ಕಳ ಹಕ್ಕು' (Childrens' right) ಮೊದಲಾದ ಕೆಲವು ಪುಸ್ತಕಗಳನ್ನು ಬರೆದಿರುವರಷ್ಟೆ! ಅದರಲ್ಲೆಲ್ಲ ಅವರು, 'ಮಕ್ಕಳಿಗೆ, ವಿದ್ಯಾಭ್ಯಾಸವೆಂದರೆ ಅದೂ ಒಂದು ಆಟವೆಂಬ ಭಾವನೆಯೂ, ಶಾಲೆ (Schooll) ಎಂದರೆ, ಅದು ಆ ಆಟದ ಮನೆಯೆಂಬ ಭಾವನೆಯೂ ಉಂಟಾಗಿ, ಮಕ್ಕಳೆಲ್ಲರೂ ಸಂತೋಷವಾಗಿದ್ದುಕೊಂಡೇ ವಿದ್ಯಾಭ್ಯಾಸ ಮಾಡಬೇಕೆಂದೂ, ಅವರಿಗೆ ಯಾವ ವಿಧದಲ್ಲಿಯೂ ಶಿಕ್ಷೆ ಮಾಡುವುದಾಗಲಿ, ಅಸಂತೋಷವನ್ನುಂಟುಮಾಡುವುದಾಗಲಿ, ಸ್ಕೂಲೆಂದರೆ ನಡುಗುವಂತಾಗಲಿ ಆಗುವಂತೆ ಮಾಡಬಾರದೆಂದೂ ಬರೆದಿರುವರಲ್ಲ! ಮತ್ತು ಅದರಂತೆಯೇ ಮಕ್ಕಳಿಗೆಲ್ಲ ಪೂರ್ಣವಾಗಿ ವಿದ್ಯಾಭ್ಯಾಸ ಮಾಡಿಸಲು ಸಾಧ್ಯವೆಂತಲೂ' ಬರೆದಿರುವರಲ್ಲ! ಅವುಗಳೆಲ್ಲವನ್ನು ನೀವು ಓದಿನೋಡಿಲ್ಲವೆ? ಹಾಗೆ ನೋಡಿದ್ದರೆ, ಅದರಂತೆಯೇ ನೀವೂ ಸಂತೋಷದಿಂದಿದ್ದು, ಸದಾ ಹುಡುಗರೂ ಸಂತೋಷವಾಗಿರುವಂತೆ ಮಾಡಿ, ಏಕೆ ಅವರಿಗೆ ವಿದ್ಯಾಭ್ಯಾಸಮಾಡಿಸಬಾರದು? ಸುಮ್ಮನೆ ಈ ಮನೋವ್ಯಥೆಗಳೆಲ್ಲ ಏಕೆ?" ಎಂದೆನು.

ಅದಕ್ಕಂದರು ಮಾಸ್ಟರು 'ನೀವು ಹೇಳಿದಂತೆ, ಇತ್ತಿತ್ತಲಾಗಿ, ಕೆಲವರು (B.A. M.A.) ಬಿ.ಎ. ಎಂ.ಎ. ಪಾಸು ಮಾಡಿದವರು, ಆ ರೀತಿಯಲ್ಲಿ ಪುಸ್ತಕಗಳನ್ನು ಬರೆದಿರುವುದು ನಿಜ! ಅವುಗಳನ್ನೆಲ್ಲಾ ನಾನೂ ಓದಿನೋಡಿರುತ್ತೇನೆ! ಆದರೇನು! ಎಲ್ಲವೂ ಪುಸ್ತಕಗಳಲ್ಲಿಯೂ ಪೇಪರುಗಳಲ್ಲಿಯೂ ಬಲುಚಂದವೇ! ಆದರೆ ಆಚರಣೆಯಲ್ಲಿ ಮಾತ್ರ ಸ್ವಲ್ಪ ಹಾಗೆ ಹಾಗೆಯೇ! ಯಾವತ್ತೂ ಸಿದ್ಧಾಂತಕ್ಕೂ ಆಚರಣೆಗೂ ಬಲುದೂರವಷ್ಟೆ! ಆದರಲ್ಲೂ ಆ ಮೇಲ್ಕಂಡ ಪುಸ್ತಕಗಳಿಗೂ ಅದರಂತೆ ಆಚರಿಸು

ವುದಕ್ಕೂ ಸ್ವಲ್ಪವೂ ಸಂಬಂಧವೇ ಉಂಟಾಗುವುದಿಲ್ಲ. ಬರೆಯುವುದಕ್ಕೇನು ಕಷ್ಟಪಡಬೇಕು? ಸ್ವಲ್ಪ ಊಟಕ್ಕೆ ದೇವರು ತಕ್ಕಷ್ಟು ಅವಕಾಶಕೊಟ್ಟಿದ್ದರೆ' ಬೇಕಾದ ದನ್ನು ಮನಬಂದಂತೆ ಬರೆಯಬಹುದು! ಕೇಳುವವರಿದ್ದರೆ ಉಪನ್ಯಾಸಮಾಡಬಹುದು! ದುಡ್ಡಿದ್ದರೆ, ಅಚ್ಚು ಹಾಕಿಸಲೂ ಬಹುದು! ಹಾಗೂ ಇಲಾಖೆಗಳ ಮೇಲ್ಪಟ್ಟ ಆಫೀಸರುಗಳ ಪರಿಚಯವಿದ್ದರೆ, ಬಲಾತ್ಕಾರವಾಗಿ ಎಲ್ಲಾ ಸ್ಕೂಲುಗಳಿಗೂ ಪುಸ್ತಕಗಳನ್ನು ತರಿಸಿಕೊಳ್ಳುವಂತೆ ಮಾಡಿ' ಮೇಲುದುಡ್ಡನ್ನೂ ಸಂಪಾದನೆ ಮಾಡಬಹುದು. ಆದರೇನು? ಅವರು ಹೇಳುವಂತೆ ವಿದ್ಯಾಭ್ಯಾಸವು, ಆನಂದಕರವಾದ ಆಟವಾಗಿ ಪರಿಣಮಿಸಲು ಸಾಧ್ಯವೇ? ಇಷ್ಟರ ಮೇಲೆ ಅವರಿಗೇನು ಕಷ್ಟ! ಅವರೇನು ನಮ್ಮಂತೆ ಬಾಲಪಾಠಕ್ಕೆ ಬರಬೇಕೆ? ನಮ್ಮಹಾಗೇ ಈ ಹುಡುಗರಲ್ಲಿ ಒದ್ದಾಡ ಬೇಕೆ? ಇವರ ಈ ಕಿರುಕುಳಗಳನ್ನೂ ಗಲಾಟೆಯನ್ನೂ ಅನುಭವಿಸಬೇಕೆ? ಎಷ್ಟಾದರೂ ಅವರು ಜೆಚ್ಚಿಗೆ ಪಾಸುಮಾಡಿರುವುದರಿಂದ, ಎಷ್ಟೇಕಡಮೆಯೆಂದರೂ ಲೋಅರ್ ಸೆಕೆಂಡರಿ ತರಗತಿಗಿಂತಲೂ ಕಡಮೆ ತರಗತಿಗೆ ಪಾಠ ಹೇಳುವಂತಿಲ್ಲ! ಅಲ್ಲೆಲ್ಲ ದೊಡ್ಡ ದೊಡ್ಡ ಹುಡುಗರು ಹೇಳಿದಂತೆ ಕೇಳುವರು! ಹೇಗಾದರೂ ಪಾಠಮಾಡಬಹುದು! ಅದಕ್ಕೆ ಮೇಲೆ ಹೈಸ್ಕೂಲು ಕಾಲೇಜು ವಿದ್ಯಾರ್ಥಿಗಳು! ಅವರೆಲ್ಲರೂ ಸ್ವಲ್ಪ ಹೆಚ್ಚು ಕಡಮೆ ನನ್ನಷ್ಟೇ ಚಿಕ್ಕವರು! ಅವರಿಗೆ ಇವರು ಮಾಡಬೇಕಾದುದೇನು? ತಮಗೆ ತಿಳಿದುದನ್ನು ಬಂದಷ್ಟು ಒದರಿ ಬಂದರಾಯಿತು! ಅವರಿಗೆ ಹತ್ತಿತೋ ಇಲ್ಲವೋ ಎಂಬುದನ್ನು ಕೂಡ ಗಮನಿಸಬೇಕಾದುದಿಲ್ಲ! ಏಕೆಂದರೆ, ಅಲ್ಲಿನವರಿಗೆ ವಿದ್ಯಾರ್ಥಿಗಳ ಜವಾಬ್ದಾರಿಯಿಲ್ಲ! ಇಂತಹ, ವಿದ್ಯಾರ್ಥಿಗಳ ವಿಷಯದಲ್ಲಿ ಜವಾಬ್ದಾರಿಯಿಲ್ಲದ, ಉಚ್ಚ ತರಗತಿಯ ಪ್ರೊಫೆಸರುಗಳ ಪುಸ್ತಕಕ್ಕೂ, ಪೂರ್ಣ ಜವಾಬ್ದಾರಿಯುಳ್ಳ ಬಾಲಕರ ವಿಷಯದಲ್ಲಿ ಬಾಲವಿದ್ಯಾಭ್ಯಾಸದ ಮಾಸ್ಟರು

ಗಳಿಗೂ ಯಾವ ಸಂಬಂಧ? ಮತ್ತೂ ಹೇಳುತ್ತೇನೆ! ಕೇಳಿರಿ! ನಾನೂ ಆ ಪುಸ್ತಕಗಳಂತೆ, ಇಲ್ಲಿಯೂ ಆಚರಿಸಲು, ಸಾಧ್ಯವೇಯೆಂದು ಪರೀಕ್ಷಿಸಿ ನೋಡಿದೆನು! ಅದರಂತೆ, ನಾನೂ ಹೊಸದಾಗಿ ಇಲ್ಲಿಗೆ ಬಂದದಿವಸ ಅದೂ ಸ್ವಲ್ಪ ಹೊತ್ತು ಮಾತ್ರ ಸಾಧ್ಯವಾಯಿತು. ಏಕೆಂದರೆ, ಹುಡುಗರೆಲ್ಲರೂ, ನಾನೂ ಹೊಸಬನಾಗಿದ್ದುದರಿಂದ, ಏನೋ ಎಂತೋಯೆಂದು, ಸ್ವಲ್ಪ ಹೊತ್ತು ಬಹಳ ಭಯ ಭಕ್ತಿಯಿಂದಿದ್ದರು. ಆದರೇನು? ಒಂದೆರಡು ಘಂಟೆ ಗಳ ಮೇಲೆ ಮೊದಲಿನಂತೆಯೇ ಆರಂಭಿಸಿ ಬಿಟ್ಟರು. ಆದರೆ, ಒಂದುಮಾತು! ನಮಗೆ ಹುಡಗರಿಗೆ ಶಿಕ್ಷಿಮಾಡುವುದೇ ಕಸಬೆಂದು ತಿಳಿಯಬೇಡಿರಿ! ಸರ್ಕ್ಕಾರ ದವರು ನಮಗೆ ಸಂಬಳ ಕೊಟ್ಟು ಇಟ್ಟಿರುವುದು ಅದಕ್ಕೋಸ್ಕರವಲ್ಲ! ಆದರೆ ಸರಕಾರದವರ ಉದ್ದೇಶವನ್ನು ನೆರವೇರಿಸುವಾಗ ಬರುವ ವಿಘ್ನಗಳಿಗೆ ಮಾತ್ರ ಸ್ವಲ್ಪ ಶಿಕ್ಷಿಸಬೇಕಾಗುತ್ತದೆ! ಅಷ್ಟೆ! ಅದೂ, ನಾನು ನಿಮಗೆ ಹಿಂದೆ ಹೇಳಿರುವಂತೆ, ಮನಸ್ಸಿನಲ್ಲಿ ಕನಿಕರಪಡುತ್ತ, 'ಅಯ್ಯೋ ದೇವರೇ! ಅನ್ಯಾಯವಾಗಿ, ಇವರಿಗೆ ಶಿಕ್ಷಿಸಬೇಕಲ್ಲ! ಇಲ್ಲದಿದ್ದರೆ, ಗತಿಯಿಲ್ಲವಲ್ಲ' ಎಂದೇ ಶಿಕ್ಷಿಸುತ್ತೇವೆಯೇ ಹೊರತು ಮತ್ತೇನೂ ಇಲ್ಲ! ಮೇಲಾಗಿ, ನಾವೂ ಮನುಷ್ಯರೇ ಅಲ್ಲವೇ? ಏನೂ ತಿಳಿಯದ, ದೇವರಂತಿರುವ, ಈ ಎಳೇಮಕ್ಕ ಳನ್ನು ಪೂರಾಶಿಕ್ಷಿಸುವುದಕ್ಕೆ ನಾವೇನು ಕೊಲೆಗಡು ಕರೇ? ಇನ್ನು ಕೊನೆ ಯದಾಗಿ ಒಂದು ಮಾತನ್ನು ಹೇಳುತ್ತೇನೆ ಕೇಳಿರಿ! ಆ ಪುಸ್ತಕಗಳನ್ನು ಬರೆದಿರುವವರಲ್ಲ! ಯಾರಾದರೂ ಸರಿಯೇ! ಇಲ್ಲಿಗೆ ಬಂದು, ಇದೇ ಈ ನನ್ನ ಹುಡುಗರಿಗೆ, ನನಗಿರುವ ಇಲ್ಲಿನ ಈ ಸಲಕರಣೆಗಳಿಷ್ಟರಿಂದಲೇ ಅವರು ಹೇಳುವಂತೆಯೇ, ಕೊನೆಯಪಕ್ಷ ಒಂದೇ ಒಂದು ತಿಂಗಳು ಕಾಲ, ಪಾಠ ಹೇಳುವ ಪಕ್ಷದಲ್ಲಿ, ನಿಜವಾಗಿಯೂ ನಾನು, ಅಂತಹ ಮಹಾನುಭಾವನ ಮನೆಯಲ್ಲಿ, ಕೊನೆಯಪಕ್ಷ ಒಂದು ವರ್ಷವಾದರೂ, ಬಿಟ್ಟೀ ಪರಿಚಾರಿಕೆ

ಯನ್ನು, ಖಂಡಿತವಾಗಿ ಸಂತೋಷದಿಂದ ಮಾಡುವೆನು ಆದರೆ, ಹಾಗೆ ಅವರು ಅವರ ಬರವಣಿಗೆಯಂತೆ, ಇಲ್ಲಿ ಎಂದು ಪಾಠಹೇಳದಿದ್ದರೆ, ಅವರೇನು ಪಂಥಕಟ್ಟುವರು? ನಿಮಗಾರಾದರೂ ಪರಿಚಯವಿದ್ದರೆ, ಅವರನ್ನೂ ಕೇಳಿ ನೋಡಿರಿ' ಎಂದರು.

ಇದನ್ನು ಕೇಳಿ ನಮಗೆ ಮಾಸ್ಟರ ಮಾತು ನಿಜವೆಂದೇ ತೋರಿತು. ಅಷ್ಟು ಹೊತ್ತಿಗೆ ಒಂಭತ್ತೂಕಾಲು ಘಂಟೆಯಾಯಿತು ಹುಡುಗರೆಲ್ಲರೂ ಒಳಕ್ಕೆ ಬಂದರು. ಒಂಭತ್ತೂವರೆ ಘಂಟೆಯ ಸಮಯ! ಆಗೊಬ್ಬ ಒಕ್ಕಲಿ ಗಿತ್ತಿಯು ಅಲ್ಲಿಗೆ ಬಂದು 'ಸ್ವಾಮಿ ಅಗೋ ಅಲ್ಲಿ ಕುಳಿತಿರುವ ನಮ್ಮಮಗ ವನ್ನು ದಯವಿಟ್ಟು ಕಳುಹಿಸಿಕೊಡಿರಿ! ಈಗತಾನೆ ಖಾಯಿಲೆ ಕಳೆದ ಹೊಸ ಪರಿಯಾದುದರಿಂದ, ಅವನಿಗೆ ಇವತ್ತು ಎಣ್ಣೆನೀರು ಹಾಕಬೇಕಾಗಿದೆ ಎಂದಳು. ಅದರಂತೆಯೆ, ಮಾಸ್ಟರು ಆ ಹುಡುಗನನ್ನು ಹೋಗೆನ್ನಲು ಅವನು ಏಳಲೇ ಇಲ್ಲ! ಆಗ ಮಾಸ್ಟರು 'ಹೋಗಪ್ಪ ಹೋಗು, ನಿಮ್ಮತಾಯೀಗ ಕರೆಯುತ್ತಾಳೆ! ಸ್ಲೇಟು ಪುಸ್ತಕಗಳನ್ನು ತೆಗೆದುಕೊಂಡು ಹೋಗು' ಎಂದರು. ಆದರೂ ಅವನು ಜೋರೆ, ಏಳಲೇ ಇಲ್ಲ. ಆಗ ಮಾಸ್ಟರು, 'ಅಮ್ಮಾ ನೀನೇ ಕೈಹಿಡಿದು ಏಳಿಸಿಕೊಂಡ ಹೋಗು' ಎಂದರು. ಅವಳು ಹಾಗೆಯೇ ಮಗನ ಕೈಹಿಡಿದು ಮೇಲಕ್ಕೆತ್ತಲು ಹೋಗಲು, ಅವನು 'ಗೊಳೋ' ಎಂದು ಅಳುತ್ತ' ಮೇಲಕ್ಕೆದ್ದನು. ಅವಳು ಅದೇಕೆಂದು ಕೆಳಗೆ ನೋಡು ತ್ತಾಳೆಯೇ ಮಗನು ಕುಳಿತಸ್ಥಳದಲ್ಲಿಯೇ..........ನು, ಅದನ್ನು ನೋಡಿ ಅವನ ತಾಯಿಯು 'ಇದಕ್ಕೇ ತನ್ನ ಮಗನು ಏಳಲು ಅಷ್ಟು ತಡಮಾಡಿದ ನೆಂಬುದನ್ನು ತಿಳಿದು, ಎಷ್ಟಾದರೂ, ಹೆತ್ತ ಹೊಟ್ಟೆಯಾದುದರಿಂದ 'ಬುದ್ಧಿ, ಈಗಿನ್ನೂ-ಖಾಯಿಲೆ ಕಳೆದ ಹೊಸಪರಿ, ವೈಭವ್ರವಿಲ್ಲ! ಸಾ

ದ್ದಕ್ಕೆ ಹುಡುಗನೂ ಕೂಡ ರೋಗದಿಂದ ನರಳಿ ಸ್ವಲ್ಪಮಂಕಾಗಿ ಬಿಟ್ಟಿದ್ದಾನೆ ಆದುದರಿಂದ ಅವನಿಗೆ ನಿಮ್ಮನ್ನು ಕೇಳಿಕೊಂಡು ಹೋಗುವುದಕ್ಕೂ ತಿಳಿಯ ಲಿಲ್ಲ! ಪಠವಾಗಿಲ್ಲ! ನಾನೇ.......ಹಲಗೆಯನ್ನು ತೊಳೆಯುತ್ತೇನೆಂದೂ ಹೇಳಿ ತೊಳೆದುಕೊಟ್ಟು ಮನೆಗೆ ಹೋದಳು.

ವಾಚಕರೇ! ಇದೇನೂ ಕಟ್ಟುಕಥೆಯೆಂದು ತಿಳಿಯಬೇಡಿರಿ! ನನ್ನ ಎದುರಿನಲ್ಲಿಯೇ ನಡೆದುದು! ನಾನೇ ಇನೆಲ್ಲವನ್ನೂ ಕಣ್ಣಾರ ನೋಡಿದೆನು ಇರಲಿ, ಆ ವೇಳೆ ಮಾಸ್ಟರ ಮುಖವನ್ನು ನೋಡಿದೆ! ಅವರು ನಗುತ್ತ, 'ಯಾರಿಗಾದರೇನು? ಶರೀರಸ್ಥಿತಿಯು ಒಂದೇ ಸಮನಾಗಿರುವುದಿಲ್ಲ! ಸಾಧ್ಯವಾದ ಮಟ್ಟಿಗೂ ಈ ರೀತಿಯಾಗಬಾರದೆಂದು, ಸರಕಾರದವರು ಆರು ವರ್ಷಗಳಿಗೆ ಮುಂಚೆ ಹುಡುಗರನ್ನು ಸ್ಕೂಲಿಗೆ ಸೇರಿಸುವುದಾಗಲಿ ಕೂರಿಸುವುದಾಗಲಿ ಕೂಡದೆಂದು ಏರ್ಪಡಿಸಿರುತ್ತಾರೆ. ಆಗಾಗ್ಯೆ ಈ ರೀತಿ ನಡೆದೇ ನಡೆಯುತ್ತವೆ! ಯತ್ನವಿಲ್ಲ! ಅನುಭವಿಸಲೇಬೇಕು! ಆದುದರಿಂದ ಲೇ ನಾನು ನಿಮಗೆ ಆಗ ಹೇಳಿದುದು! ಮಕ್ಕಳತರಗತಿ ಬಹಳ ಕಷ್ಟವೆಂದು! ಸಾಲದ್ದಕ್ಕೆ ನಮಗೆ ತಿಂಗಳೊಂದಕ್ಕೆ ನಾಲ್ಕಾಣೆಗಳು ಊದಿನ ಕಡ್ಡಿಯ ಖರ್ಚು ಬೇರೆ ಬಿದ್ದೇಬೀಳುವುದು ಆದರೆ ಪುಣ್ಯಕ್ಕೆ ಕಾಲಕ್ಕೆ ಸರಿಯಾಗಿ, ಅವಳು ಬಂದಳಲ್ಲ! ಅದಕ್ಕೀಗ ಸಂತೋಷ ಪಡಬೇಕು' ಎಂದರು. ನನಗೆ ಅವರ, ಈ ಶಾಂತತೆಯನ್ನು ನೋಡಿ ಸಂತೋಷವೂ ಆಶ್ಚರ್ಯವೂ ಆಯಿತು.

ಇನ್ನು ನಾನು ಮನೆಗೆ ಹೊರಡಬೇಕೆಂದಿದ್ದೆನು. ಅಷ್ಟರಲ್ಲಿ ಸ್ಕೂಲುಗಳ ಅ|| ಇನ್ಸ್ಪೆಕ್ಟರವರು ಅಲ್ಲಿಗೆ ಬಂದರು ಪರಸ್ಪರ ನಡೆಯಬೇಕಾದ ಮರ್ಯಾದೆ ಗಳೆಲ್ಲವೂ ನಡೆದುವು. ಇನ್ಸ್ಪೆಕ್ಟರವರು ನನ್ನನ್ನು ಕೇಳಿದರು! ಇವರಾರೆಂದ

ಮಾಸ್ಟರು ತಕ್ಕ ಉತ್ತರವನ್ನು ಹೇಳಿದೊಡನೆಯೆ, ಇನ್ಸ್ಪೆಕ್ಟರವರು ಮಾಸ್ಟರನ್ನು ಕುರಿತು 'ಈವಾಗ ಆವ ಪಾಠಮಾಡುತ್ತಿರುವಿರಿ? ನಿಮ್ಮ ವೇಳಾಪತ್ರಿಕೆಯಲ್ಲಿ (Time Table) ಈಗ ಯಾವಪಾಠವಿದೆ' ಎಂದರು. ಅದಕ್ಕೆ ಮಾಸ್ಟರು, ಆಗ ತಾವು ಮಾಡುತ್ತಿರುವ ಪಾಠದ ಹೆಸರನ್ನು ಹೇಳಿ 'ಕ್ಷಮಿಸಬೇಕು. ಸ್ವಾಮಿ! ಟೈಂ ಟೇಬಲ್ಲಿಗೂ (ವೇಳಾಪತ್ರಿಕೆ) ನಮ್ಮ ಪಾಠಕ್ರಮಕೂ ಎಷ್ಟೋ ವೇಳೆಗಳಲ್ಲಿ ಸರಿಬೀಳುವುದಿಲ್ಲ! ಉದಾಹರಣೆಗಾಗಿ, ಇಲ್ಲಿನ ಪಾಠದ ಪಟ್ಟಿಯಲ್ಲಿ, ಒಂದೊಂದು ಪಾಠಕ್ಕೂ 45 ನಿಮಿಷಗಳ ಕಾಲವಿರುವುದು ಈ ನಾಲ್ವತ್ತೈದು ನಿಮಿಷಗಳಲ್ಲಿ ಪರಮಾವಧಿ, ಹದಿನೈದು ಹುಡುಗರು ಓದಬಹುದು. ಇನ್ನು ಉಳಿದ ಇಪ್ಪತ್ತು ಮೂವತ್ತು ಹುಡುಗರಿಗೆ, ಮತ್ತೊಂದು ಇನ್ನೊಂದು ಮುಕ್ಕಾಲು ಘಂಟೆಯೇ ಆಗಬೇಕು. ಆ ವೇಳೆಯಲ್ಲಿ ಟೈಂ ಟೇಬಲ್ಲಿನಲ್ಲಿ, ಬೇರೆ ಪಾಠವಿರುವುದು ಆದರೆ, ತಾವು ಕೇಳಬಹುದು. ಸ್ವಲ್ಪ ಸ್ವಲ್ಪ ಅಂದರೆ, ಪರೀಕ್ಷಾರ್ಥವಾಗಿ, ಮೂರುನಾಲ್ಕು ಪಙ್ತಿಗಳನ್ನು ಮಾತ್ರ ಪ್ರತಿಯೊಬ್ಬ ಹುಡುಗನಿಂದಲೂ ಓದಿಸಿದರೆ ಸಾಲದೆ? ಹಾಗೆ ಮಾಡಿದರೆ ಆಯಾ ವೇಳೆಗಳಲ್ಲೆ ಆಯಾ ಪಾಠಮಾಡಬಹುದಲ್ಲ' ಎಂದು, ಆದರೆ ಅದು ತರಗತಿಯಲ್ಲಿ ಸಾಧ್ಯವೇ ಹೊರತು, ಈ ಸಣ್ಣ ತರಗತಿಯ ಬಾಲಕರಿಗೆ ಪೂರ್ತ ಪಾಠವನ್ನೂ ಪ್ರತಿಯೊಬ್ಬರ ಬಾಯಲ್ಲಿಯೂ ಓದಿಸಲೇ ಬೇಕು! ಇಲ್ಲವಾದರೆ, ಬಾಲಕರಿಗೆ ಸ್ವಲ್ಪವೂ ಓದುವ ಶಕ್ತಿಯೇ ಇಲ್ಲದಂತಾಗುವುದು' ಎಂದರು. ಅದಕ್ಕೆ ಇನ್ಸ್ಪೆಕ್ಟರವರು, 'ಇದೇಏನಯ್ಯಾ ನೀವು ಟ್ರೈನಿಂಗಿನಲ್ಲಿ ಕಲಿತಿದ್ದುದು? ಟೈಂಟೇಬಲ್ಲಿಗೆ ವಿರುದ್ಧವಾಗಿಯೇ ಕೆಲಸ ಮಾಡುವುದು? ಹೇಗೋ ಹೊಂದಿಸಿಕೊಂಡು, ವೇಳಾಪತ್ರಿಕೆಗೆ ವಿರೋಧವಿಲ್ಲದಂತೆ, ಕೆಲಸ ಮಾಡಿದರೆ ತಾನೆ, ಟ್ರೈನಿಂಗ್ ಪರೀಕ್ಷೆಗೆ ಓದಿದ್ದ ಸಾರ್ಥಕ?' ಎಂದರು.

ಅದಕ್ಕಂದರು ಮಾಸ್ಟರು 'ಸ್ವಾಮಿ ಕ್ಷಮಿಸಬೇಕು! ಬಾಯಿ ಮಾತಿನ

ಟ್ರೈನಿಂಗಿಗೂ, ಆಚರಣೆಯ ಪಾಠಕ್ರಮಕ್ಕೂ ಸಂಬಂಧವಿಲ್ಲ! ಟ್ರೈನಿಂಗ್ ತರಗತಿಗಳಲ್ಲಿ ಮಾದರಿಪಾಠಕ್ಕೆ ಅವರು ಕರೆದು ಕೊಂಡು ಬರುವುದು, ಹತ್ತು ಹುಡುಗರು. ನನಗಿರುವುದು ಸ್ವಲ್ಪ ಹೆಚ್ಚುಕಡಮೆ ಐವತ್ತು ಹುಡುಗರು; ಅವರು ನಮಗೆ ಬರೆಸಿರುವ ನೋಟ್ಸಿನಲ್ಲಿ 'ಮಾಸ್ಟರಿಗೆ 2೦ ಹುಡುಗರಿದ್ದರೆ ಸಾಕು' ಎಂದು. ಅದರಂತೆಯೇ, ತಾವೂ ಸಹ ನನಗೆ ಇಪ್ಪತ್ತು ಹುಡುಗರನ್ನು ಮಾತ್ರ ಕೊಟ್ಟು, ಪಾಠಹೇಳಲು ಅಪ್ಪಣೆ ಕೊಟ್ಟರೆ, ತಮ್ಮ ಅಪ್ಪಣೆಯಂತೆಯೇ ಟೈಂ ಟೇಬಲ್ಲಿನಂತೆ ಪಾಠ ನಡಿಸುತ್ತೇನೆ. ಈಗಿನ ಸ್ಥಿತಿಯಲ್ಲಿ ನಾನು ಈ ಹುಡುಗರಿಗೆಲ್ಲಾ ಪಾಠಮಾಡುವುದರಲಿ ಗಲಾಟೆಮಾಡದಂತೆ, ಅಧೀನದಲ್ಲಿಟ್ಟುಕೊಂಡಿರುವುದೇ ಸಾಕಾಗುತ್ತದೆ' ಎಂದನು.

ಇದನ್ನು ಕೇಳಿ ಇನ್ಸ್ಪೆಕ್ಟರವರಿಗೆ ಸಿಟ್ಟುಬಂದಿತು! 'ತಮಗೇ ತಂದನಲ್ಲ' ಎಂದು 'ಏನಯ್ಯ, ಮಾತಿಗೆ ಮಾತು ಜೋಡಿಸುತ್ತೀರಿ? ನಿಮ್ಮ ಪಾಂಡಿತ್ಯವನ್ನೆಲ್ಲಾ ಎದುರು ಜವಾಬಿನಲ್ಲೇ ತೋರಿಸುತ್ತೀರಿ! ನಿಮ್ಮಂತಹವರು ಈ ಕೆಲಸಕ್ಕೆ ತಕ್ಕವರಲ್ಲ! ಕ್ರಮವಾಗಿ ವಿಧೇಯತೆ ಯಿಂದ ಇದ್ದರೆ ಇರಬೇಕು! ಇಲ್ಲವಾದರೆ, ಸುಮ್ಮನೆ ರಾಜಿನಾಮೆಯನ್ನು ಕೊಟ್ಟು ಹೋಗಬೇಕು' ಎಂದರು.

ಈ ಮಾತನ್ನು ಕೇಳಿ ಮಾಸ್ಟರಿಗೂ ಸಿಟ್ಟುಬಂದಿತು ಇನ್ನೂ ತರುಣರು! ಹುಡುಗತನ! "ನಾನು ಬೆಳಗಿನಿಂದ ಸಾಯಂಕಾಲದವರೆಗೂ ಈ ಐವತ್ತು ಹುಡುಗರನ್ನೂ ಇಟ್ಟುಕೊಂಡು, ಮನಃಪೂರ್ವಕವಾಗಿ ಕೆಲಸ ಮಾಡಿದರೂ, ಪಡಬಾರದ ಕಷ್ಟವನ್ನು ಪಟ್ಟರೂ, ಇವರಿಗೆ ತೃಪ್ತಿಯಿಲ್ಲವಲ್ಲ! ಅವರು ಕೇಳಿದುದಕ್ಕೆ ಉತ್ತರ ಹೇಳಿದರ, ಎದುರು ಜವಾಬೆನ್ನುತ್ತಾರೆ! ಇನ್ನು ಮುಂದೆ ಹೀಗೆಮಾಡಬಾರದು, ಹಾಗೆ ಮಾಡಬಾರದು' ಎಂದು

ವಿವೇಕವನ್ನು ಹೇಳದೆ, ಒಂದೇ ಮಾತಿನಲ್ಲಿ, ರಾಜಿನಾಮೆಯನ್ನು ಕೊಟ್ಟು ಹೋಗೆನ್ನುತ್ತಾರೆ! ಆದುದರಿಂದ ಇಂತಹವರ ಕೈ ಕೆಳಗೆ, ಕೆಲಸಮಾಡುವುದಕ್ಕಿಂತಲೂ, ಕೆಲಸಬಿಡುವುದೇ ವಾಸಿ" ಯೆಂದು ಯೋಚಿಸಿ; ಸಿಟ್ಟಿನಿಂದ ನಾಲ್ಕು ಪಜ್ತಗಳನ್ನು ಗೀಚಿ. ಸಾಹೇಬರ ಕೈಯಲ್ಲಿ ಕೊಟ್ಟೇ ಕೊಟ್ಟರು.

ಮಾಸ್ಟರು ಸಿಟ್ಟಿನಲ್ಲಿ, ಇನ್ಸ್ಪೆಕ್ಟರ್ ಸಾಹೇಬರಲ್ಲಿ, ರಾಜೀನಾಮೆಯ ಪತ್ರವನ್ನೇನೋ ಕೊಟ್ಟರು! ಕೊಟ್ಟರೇನು? ಅವರ ಮುಖವನ್ನು ನೋಡಬೇನು! ಮುಖದಲ್ಲಿ ಆಗಲೇ ವಿಷಾದವು ತುಂಬಿಕೊಂಡಿತ್ತು! ಕಣ್ಣಿನಲ್ಲಿ ನೀರು ಬರುವ ಸ್ಥಿತಿಯಾಗಿತ್ತು! ಮುಖದಲ್ಲಿ ಕೇವಲ ದೈನ್ಯಾವಸ್ಥೆಯು ಕಂಡುಬರುತ್ತಿತ್ತು! ಯೋಚಿಸುತ್ತಾರೆ 'ನಾನೇಕೆ ರಾಜಿನಾಮೆಕೊಟ್ಟೆನು? ಈಗ ಇನ್ನೆಲ್ಲಿಗೆ ಹೋಗಲಿ? ಈಕ್ಷಣ ನನಗಾರು ಬೇರೆ ಕೆಲಸಕ್ಕೆ ಮಾಲೆ ಹಿಡಿದು ಕಾದಿರುವವರು? ಈಗ ಮಾತ್ರ ಏನೋ ಬಂದು ವಿಧವಾಗಿ ಸಾಹೇಬರನ್ನು 'ಕ್ಷಮಿಸಬೇಕೆಂದು ಕೇಳಿ ಬಿಟ್ಟಿದ್ದರೆ, ಎಷ್ಟುಚನ್ನಾಗಿದ್ದಿತು? ಇನ್ನವರು ಪುನಃ ಬರುವುದು ಆರುತಿಂಗಳೋ ವರ್ಷವೋ ಆಗುತ್ತಿತ್ತಲ್ಲ? ಅಲ್ಲಿಯ ವರೆಗೂ ನನ್ನನ್ನು ಕೇಳುವವರಾರಿದ್ದರು? ನಾನೇ ನಾನಾಗಿರಬಹುದಾಗಿತ್ತಲ್ಲ! ಈಗೇನು ಮಾಡಲಿ' ಎನ್ನುತ್ತ ತಳಮಳಗುಟ್ಟುತ್ತಿದ್ದರು.



ಆ ಕಡೆಯಲ್ಲಿ, ಸಾಹೇಬರು ರಾಜಿನಾಮೆಯ ಪತ್ರವನ್ನು ತೆಗೆದುಕೊಂಡರು? ಓದಿನೋಡಿ ಗಾಬರಿಯಾದರು? 'ನಾನು ಹೆದರಿಸಿ, ಇವನಿಗೆ ಬುದ್ಧಿ ಕಲಿಸಬೇಕೆಂದು, ಹಾಗೆ ಹೇಳಿದರೆ, ಇವನು ನಿಜವಾಗಿಯೇ ರಾಜೀನಾಮೆಯನ್ನು ಕೊಟ್ಟನಲ್ಲ! ಹೀಗೆಯೇ ನಾನು ಹೋದಕಡೆಯಲ್ಲಿ ಎಲ್ಲರೂ, ರಾಜೀನಾಮೆ ಕೊಡುತ್ತಬಂದರೆ, ನನ್ನ ಪರ್ಯವಸಾನವೇನು?, ಎಂದು ಯೋಚಿಸಿ, ಬುದ್ಧಿ ಹೇಳಿ ಇವರನ್ನೇ ನಿಲ್ಲಿಸಬೇಕೆಂದು 'ಹಾಗಲ್ಲರಪ್ಪ



ನಾನು ಹೇಳುವುದು..........ಎಂದು ಅನ್ನುವಾಗಲೇ ನಮ್ಮ ಮಾಸ್ಟರಿಗೆ ಮುಕ್ಕಾಲು ಜೀವ ಬಂದಂತಾಗಿ, 'ಮಹಾಸ್ವಾಮಿ! ಕ್ಷಮಿಸಬೇಕು........, ಎಂದು ಹೇಳಿಕೊಂಡರು. ಸಾಹೇಬರು ಪತ್ರವನ್ನು ಹರಿದು ಹಾಕಿ ಇನ್ನು ಮುಂದೆ '........ಇರಬೇಕು ಎಂದು ಹೇಳಿ ಹೊರಕ್ಕೆ ಹೋದರು. ನಾನು ಇವೆಲ್ಲವನ್ನೂ ನೋಡಿ, ನನ್ನ ಮನಸ್ಸಿನಲ್ಲಿಯೇ ನಗುತ್ತ 'ಇವತ್ತು ಇಲ್ಲಿಗೆ ಬಂದದ್ದು ಒಳ್ಳೆಯದೇ ಆಯಿತು, ನನ್ನ ತಮ್ಮನ '**ಅದನ್ನೇ ಉಂಡೇನು ಕದತೆಗಿ**' ಎಂಬುದಕ್ಕೆ 'ಇವರಿಬ್ಬರೂ ಉದಾಹರಣೆಯಾದರು' ಎಂದು ಕೊಂಡು ಮನೆಗೆ ಬಂದುಬಿಟ್ಟೆನು.

## ೬ ನೆಯ ಪ್ರಕರಣ

ಒಂದು ದಿನ ಮಧ್ಯಾಹ್ನ ಎರಡು ಘಂಟೆಯ ವೇಳೆಯಲ್ಲಿ, ನಾನು ಎಲ್ಲಿಗೋ ಒಂದು ಉದ್ದಿಶ್ಯವಾಗಿ, ಹೋಗಬೇಕಿತ್ತು. ಬೀದಿಯ ಬಾಗಿಲಿಗೆ ಬಂದೆ! ಅಷ್ಟು ಹೊತ್ತಿಗೆ ಸರಿಯಾಗಿ ಒಬ್ಬ ಸೌದೆಯವನು, ತನ್ನ ತಲೆಯ ಮೇಲೆ ತಕ್ಕಷ್ಟು ದೊಡ್ಡದೊಂದು ಸೌದೆಯ ಹೊರೆಯನ್ನು ಹೊತ್ತುಕೊಂಡು, 'ಸೌದೆ ಸೌದೇ' ಎಂದು ಕೂಗುತ್ತ ಬಂದನು ಆಗ ನನ್ನ ಮಗ್ಗಲು ಮನೆಯ ವರು, 'ಎಲೋ! ನೀನು ಯಾರು? ಒಳ್ಳೆಯವನೋ?' ಎಂದು ಕೇಳಿದರು ಆದರೆ ನಿಮಗೊಂದು ಅನುಮಾನ ಬರಬಹುದು. 'ಬೀದಿಯಲ್ಲಿ ಕೂಗುವ ವರನ್ನೆಲ್ಲ ಕರೆದು 'ಎಲಾ ಒಳ್ಳೆಯವನೊ-ಕೆಟ್ಟವನೋ?' ಎಂದು ಕೇಳ ಬಹುದೇ? ಎಂದು. ಆದರೆ ಅವರ ಅರ್ಥವು ಅದಲ್ಲ 'ನೀನು ಒಕ್ಕಲಿಗನೋ ಆದಿಕನ್ನಡಿಗನೋ?' ಎಂದು ಕೇಳುವುದಕ್ಕೆ ಬದಲಾಗಿ, ಹಾಗೆ ಕೇಳುವ ಪದ್ಧತಿ! ಅದರಲ್ಲಿಯೂ ಒಂದು ವಿಶೇಷ! 'ಆದಿಕನ್ನಡಿಗನೋ' ಎಂದು ಕೇಳಿದರೆ, ಅವನ ಮನಸ್ಸು ಎಲ್ಲಿ ನೋಯುತ್ತದೋ' ಎಂಬ ಉದ್ದೇಶ್ಯದಿಂದ

ಅದಿಕೆನ್ನಡಿಗನೆಂಬ ಮಾತ್ರನ್ನೂ ಹೇಳದೆ, ತಾವು ಅಧ್ಯಾಹಾರ ಮಾಡಿಕೊಂಡು ಕೇಳುವಂತೆಯೆ, ಅವನೂ ಅದಕ್ಕೆ ತಕ್ಕಂತೆ ಉತ್ತರ ಹೇಳಲಿ! ಎಂಬುದೇ! ಇದಕ್ಕೆ ಕಾರಣವು ಇನ್ನೂ ಸ್ವಲ್ಪ ಮಟ್ಟಿಗೆ ಪೂರ್ವಪದ್ಧತಿಯಿರುವುದೇ! ಆಯಿತು! ಅವನು 'ನಾನು ಒಳ್ಳೆಯವನೆಂದು' ಹೇಳಲು, ಹತ್ತಿರಕ್ಕೆ ಬಂದು ಸೌದೆಯನ್ನು ನೋಡಿ, 'ಸರಿ ಖಂಡಿತ ಎಷ್ಟಕ್ಕೆ (ಆಣೆ-ಕಾಸು-ದುಡ್ಡು) ಹಾಕುತ್ತೀಯೋ? ಎಂದರು. ಅವನು ಎಂಟಾಣೆಗಳಿಗಾದರೆ ಹಾಕುತ್ತೇನೆನ್ನಲು, ಇವರು ಎರಡಾಣೆಗಳಿಗೆ ಕೇಳಿದರು. ಅವನು ಹಾಕುವುದಿಲ್ಲವೆಂದು ಹೇಳಿ, ಮುಂದಕ್ಕೆ ಹೊರಟನು ನನಗೆ ಆ ವೇಳೆಗೆ ಸರಿಯಾಗಿ ನನ್ನ ತಮ್ಮನ ಸ್ವಂತದ (patent word ಹಕ್ಕಿನ ಮಾತು) ಮಾತು ಜ್ಞಾಪಕಕ್ಕೆ ಬರಲು, ಆ ಮಾತಿನ ಪರೀಕ್ಷೆಗೆ ಒಳ್ಳೆಯ ಸಂದರ್ಭವು ಸಿಕ್ಕಿತೆಂದು ಯೋಚಿಸಿ, ನಾನು ಮೊದಲು ಹೊರಟ ಉದ್ದಿಶ್ಯವನ್ನು ನಿಲ್ಲಿಸಿಬಿಟ್ಟು, ಸೌದೆಯವನ ಹಿಂದೆಯೇ ಸುಮ್ಮನೆ ಹೊರಟೆನು.

ಸೌದೆಯವನು ಮುಂದಿನ ಮೂರು ಮನೆಯನ್ನು ದಾಟಿದನು, ನಾಲ್ಕನೆಯ ಮನೆಯವರು ಎರಡೂ ಕಾಲಾಣೆಗೆ ಕೇಳಿದರು 'ಕೊಡುವುದಿಲ್ಲ' ಅಲ್ಲಿ ಮೂರಾಣೆಗೇ ಕೇಳಿದರು; ಕೊಡಲಿಲ್ಲ! ಇನ್ನು ನಿಮಗೆ ಎರಡೂ ಕಾಲಾಣೆಗೆ ಕೊಡುವೆನೇ ಎಂದ! (ಇವನ ಸತ್ಯತೆ ಎಷ್ಟೆಂದು ನಿಮಗೂ ಗೊತ್ತಿರಬಹುದು) ಹೀಗೆಯೇ ಮೂರು ಫರ್ಲಾಂಗ್ ದೂರ ಹೋಗುವ ವೇಳೆಗೆ ಮೂರೂವರೆ ಆಣೆಗಳ ವರೆಗೂ ಏರಿತು! ಆದರೂ ಅಷ್ಟಕ್ಕೂ ಹಾಕಲು ಅವನು ಮನಸ್ಸುಮಾಡಲಿಲ್ಲ! ಹಾಳು ಆಸೆ! ಮುಂದಕ್ಕೆ ಹೊರಟ ಅಲ್ಲೊಬ್ಬ ಬಡಮಾಸ್ತರು! ಏನು ಹೇಳುತ್ತೀ? ಎಂದರು. ಹಿಂದಿನಂತೆ ಹೇಳಿದ! ಇವನ ಪುಣ್ಯಕ್ಕೆ ಅವರು ಎರಡಾಣೆಯಿಂದ ಆರಂಭಿಸಿ, ಪರಮಾ

ವಧಿ ಮೂರಾಣೆಗಳಿಗೆ ಏರಿಸಿದರು! ಪಾಪ! ನೋಡಿದ ಹಾಗೆಯೇ ನಿಂತು ಕೊಂಡ! ಯೋಚಿಸಿದ ಏನು ಗ್ರಹಚಾರ! ಹಿಂದೆಯೆ, ಅವರು ಮೂರೂವರೆ ಆಣೆಗಳಿಗೆ ಕೇಳಿದಾಗ ಹಾಕಿದ್ದರೆ ಎಷ್ಟು ಚನ್ನಾಗಿತ್ತು ಹಾಳು ಆಸೆಯಿಂದ ಅನ್ಯಾಯವಾಗಿ, ಈ ಬಿಸಿಲು ಹಣ್ಣನ್ನು ತಿನ್ನುತ್ತ ಎರಡು ಫರ್ಲಾಂಗ್ ಸುತ್ತ ಬೇಕಾಯಿತು! ಪುನಃ ಈಗ ಹಿಂದಕ್ಕೆ ಹೋಗಬೇಕು! ಇಲ್ಲವಾದರೆ ಆರು ಕಾಸಿಗೇ ಸೊನ್ನೆ! ತಿರುಗಿ ಹೋದರೆ ಅವರೂ ಹಂಗಿಸಿ ಆಡಿಕೊಳ್ಳಬಹುದು ಅಮಾನವೂ ಆಗಬಹುದು. ಆದರೆ ಏನು ಮಾಡೋಣ? ಬಿಟ್ಟರೆ ಅದೂ ಇಲ್ಲ. ಹೇಗೋ ಆ ಆರು ಕಾಸಾದರೂ ಬಂದರೆ, ಮೂರುದಿನಗಳ ಶೀಪೆ ಎಣ್ಣೆ ಗಾದರೂ ಆಗುವುದು ಎಂದುಕೊಂಡು ಹಿಂದಿನ ಮನೆಗೇ ಬಂದನು. ಮನೆ ಬಾಗಿಲಿಗೆ ಬಂದು, ಬಾಗಿಲನ್ನು ನೂಕಿ, ಥೂ! ' ಈ ಹಾಳು ಸೌದೆಯು ಮನೆ ಹಾಳಾಗ' ಎಂದು ಥೊಪ್ಪನೆ ನೆಲದ ಮೇಲೆ ಹಾಕಿ, ' ಈ ಹಾಳು ಹೊಟ್ಟೆಗೆ ಬೆಂಕಿಹಾಕ! ಎಷ್ಟು ದುಡಿದರೂ ಸಾಲದು. ಎಷ್ಟುತಿಂದರೂ ಸಾಲದು' ಎಂದನು. ಸರಿ! ನಾನು ನೋಡಿಕೊಂಡೆ ಈಗ ನನ್ನ ತಮ್ಮನ, **ಅದನ್ನೇ ಉಂಡೇನು ಕದತೆಗಿ** ಎಂಬುದು ಇಲ್ಲಿಯೂ ನಿದರ್ಶನಕ್ಕೆ ಬಂದಿತೆಂದು ಕೊಂಡೆನು. ಅಷ್ಟರಲ್ಲಿ ಒಳಗಿನಿಂದ ಮನೆಯ ಯಜಮಾನನು ಬಂದು, ಸೌದೆಯುವನು ಯೋಚಿಸಿದಂತೆಯೇ ಹಂಗಿಸಿ ಮಾತನಾಡಿ, ' ನಿನ್ನ ಪುಣ್ಯ ಚನ್ನಾಗಿತ್ತು! ಆರುಕಾಸು ಹೆಚ್ಚಾಗಿ ಸಿಕ್ಕಿತು' ಎಂದರು.

ಅದಕ್ಕೆ ಸೌದೆಯುವನು ' ಬುದ್ಧೀ! ಹಾಗೆನ್ನಬೇಡಿ! ಇವತ್ತು ನೀವು ನರಿಯ ಮುಖವನ್ನು ನೋಡಿದ್ದಿರೆನ್ನಬೇಕು! ಆದುದರಿಂದಲೇ ನಿಮಗೆ ಎಂಟಾಣೆಯ ಸವುದೆಯು ಮೂರುವರೆ ಆಣೆಗಳಿಗೆ ಸಿಕ್ಕಿತು! ಅದಿರಲಿ ಬುದ್ಧೀ! ಇನ್ನೊಂದು ಮಾತು ನಾನು ಹೇಳುವ ಒಂದುವಿಷಯವನ್ನು ಮಾತ್ರ ನಿಧಾನವಾಗಿ ಯೋಚಿಸಿರಿ! ನೀವು ಈಗಕೊಟ್ಟ, ಈ ಮೂರೂವರೆ ಆಣೆಗಳು,

ನಾನು ನಾಲ್ಕು ಮೈಲಿಗಳ ದೂರ ಹೊತ್ತುಕೊಂಡು ಬಂದುದರ ಕೂಲಿಯೋ ಅಥವಾ ನಾನು ಸಣ್ಣಸಣ್ಣನಾಗಿ ಸೀಳಿದುದರ ಕೂಲಿಯೋ? ಅಥವಾ ಬರಿಯ ಸೌದೆಯ ಬೆಲೆಯೋ? ನೀವೇ ಹೇಳಿರಿ! ಬುದ್ಧೀ! ನಿಮಗೆ ಊರಿನ ರೈಲ್ವೆ ಸ್ಟೇಷನ್ನಿನಿಂದ, ಒಂದು ಟ್ರಂಕನ್ನು ತಂದು ಕೊಟ್ಟರೇನೆ ಒಂದಾಣೆ ಕೂಲಿ ಕೊಡುವಿರಿ ಅಂತಹದರಲ್ಲಿ, ನಾನು ನಾಲ್ಕು ಮೈಲಿ ಹೊತ್ತಿದುದರ ಕೂಲಿಯೇನು? ನನ್ನ ಸೌದೆಯ ಬೆಲೆಯೇನು? ಸೀಳಿದುದರ ಕೂಲಿಯೇನು? ಸ್ವಲ್ಪವಾದರೂ, ಒಂದು ದಿನವಾದರೂ ಯೋಚಿಸಿರುವಿರಾ? ಸಾಲದ್ದಕ್ಕೆ ಇನ್ನೂ ಕೆಲವು ಪುಣ್ಯಾತ್ಮರು 'ಮುಂಡೇಗಂಟೆರನ್ನು ಎಷ್ಟೋ (ಕಮ್ಮಿ ಬೆಲೆಗೆ) ಕೇಳಿದೆ! ಹಾಕಲಿಲ್ಲ! ಹೋಗಿಯೇ ಬಿಟ್ಟೆ! ಎನ್ನುವರು. ಆದರೆ ಬುದ್ಧೀ! ನಾವೂ ಅವರಂತೆಯೇ 'ಸೌದೆಯನ್ನು ಕಡಿದು ತಂದು ಸೀಳಿ ಒಣಗಿಸಿ ಹೊರೆಕಟ್ಟಿಕೊಂಡು ನಾಲ್ಕೈದು ಮೈಲಿ ದೂರ ನಡೆದು, ಇವರ ಮನೆಯ ಬಾಗಿಲಿಗೆ ಸಿದ್ಧವಾಗಿ ತಂದರೂ ಒಂದೇ ಒಂದು ಬಿಲ್ಲೆಯನ್ನೂ (ಮೂರು ಕಾಸು) ಹೆಚ್ಚಾಗಿ ಕೊಡುವುದಿಲ್ಲನಲ್ಲ; ಎಂದು ಅಂದುಕೊಳ್ಳುತ್ತೇ ಆದರೆ ಬುದ್ಧೀ ಇಬ್ಬರೂ, ದುಡ್ಡಿಗೋಸ್ಕರ, ಆಯಾ ವೇಳೆಗಳಲ್ಲಿ ಸಂಕಟವಾಗಿ ಅಂದರೂ ಇಬ್ಬರು ಅನ್ನುವುದು ಬಹಳ ಅನ್ಯಾಯವಾದುದು! ಏಕಂದರೆ, ಅವರೂ ನಮ್ಮನ್ನ ಮನೆಯ ಬಾಗಿಲಿಗೆ ತರಹೇಳಲಿಲ್ಲ! ನಾವೂ ಅವರನ್ನ ಬಲಾತ್ಕಾರಮಾಡಲಿಲ್ಲ! ಇಂತಹುದರಲ್ಲಿ ಒಬ್ಬರನ್ನೊಬ್ಬರು ಅನ್ನಲು ಕಾರಣವೇನು? ಸುಮ್ಮನೆ ಅನ್ಯಾಯವಾಗಿ ಪಾಪವನ್ನು ಕಟ್ಟಿಕೊಳ್ಳುವುದಕ್ಕೆ! ಅಷ್ಟೇನೆ ಬುದ್ಧೀ! ಈ ದಿನ ನನ್ನ ಗ್ರಹಚಾರ! ಅದೇನೋಕಾಣೆ! ಹೆಚ್ಚಿನ ದುಡ್ಡಿನಾಸೆಯಿಂದ ಹೊರಲಾರದಂತಹ ಹೊರೆಯನ್ನು ತಂದರೂ, ಯಾರಿಗೂ ಈ ದಿನ ಸೌದೆಯೇ ಬೇಡವಾಗಿ, ತಕ್ಕಷ್ಟು ಬೆಲೆಯು ಬಾರದೆ ಹೋಯಿತು. ಏನೇ ಆದರೂ ಆರಾಣೆಗಳಿಗೆ ಕಡಮೆ ಹಾಕುವ ಸೌದೆಯಲ್ಲ! ಯತ್ನವಿಲ್ಲ!

ಬರುತ್ತೇನೆ! ಬುದ್ಧೀ ಎಂದು ಹೇಳಿ, ಕೈಮುಗಿದು ಹೊರಟುಹೋದನು. ಆ ಮೇಲೆ ಇದೆಲ್ಲವನ್ನು ನೋಡಿ ನನ್ನ ಮನಸ್ಸಿನಲ್ಲಿಯೇ ನಗುತ್ತ ಮನೆಗೆ ಹೋದೆನು. ಅಂತೂ ಒಟ್ಟಿನಲ್ಲಿ ಆದುದೇನು? ನಾವು ಈ ಲೋಕದಲ್ಲಿ ಒಂದಿಲ್ಲೊಂದು ರೀತಿಯಿಂದ, ಎಲ್ಲಾ ವಿಷಯಗಳಲ್ಲಿಯೂ '**ಅದನ್ನೇ ಉಂಡೇನು ಕದತೆಗಿ**' ಎನ್ನುವಂತೆಯೇ ನಡೆಯಬೇಕಾಗುತ್ತದೆಯಲ್ಲವೆ? ಆಗಲಿ॥ ನಮಸ್ಕಾರ॥ ಬರುತ್ತೇನೆ। ವಿಶ್ವಾಸವಿರಲಿ॥ ಮರೆಯಬೇಡಿರಿ॥

**—: ಭದ್ರಂ ಶುಭಂ ಮಂಗಳಂ :—**



‘ಸಂಪದಭ್ಯುದಯ’ ಮೈಸೂರು:—

ನವೀನ ಸ್ತ್ರೀ ಸ್ವಾತಂತ್ರ್ಯದಲ್ಲಿ........ವಿಷಯಗಳನ್ನು ವಿಸ್ತಾರವಾಗಿಯೂ ಮನೋರಂಜಕವಾಗಿಯೂ ವಿವರಿಸಿರುತ್ತಾರೆ. ನನ್ನ ಅನುಭವವೆಂಬುದರಲ್ಲಿ....ಒಂದು ಕಥೆಯರೂಪದಲ್ಲಿ ಬಹಳ ಸ್ವಾರಸ್ಯವಾಗಿ ರಚಿಸಿರುವದು. ಶೈಲಿಯು ಬಹಳ ಸುಲಭ.

‘ಆತ್ಮಾಹ್ಲಾದಿನೀ’ ಚಿ

‘ಇವು-೪ ಭಾ
ಗಳಾಗಿವೆ. ವಿದ್ಯಾರ್ಥಿ

**ಶ್ರೀಯುತ ಜಿ.**
ಯವರು:—

ಈವರೆಗೂ ನ
ವಿಮರ್ಶಿಸಿ ಬರೆಯು
ಡದ ಪುಸ್ತಕಗಳೆಂ
ಕಗಳನ್ನು ನೋಡಿದ
ನಿಮ್ಮ ಪೀಠಿಕೆ(ನವಿ
ಪ್ರತಿಯೊಂದು ವಿಷ
ಸ್ವಾರಸ್ಯವೂ, ನ್ಯಾ
ಯೂ ಬಹಳ ಚೆನ್ನಾ
ತತ್ವವನ್ನು ಇಷ್ಟು
ಗಿಯೂ ಯಾರೂ ಹೇ
ಸುಲಭವಾಗಿ, ನಿರ
ವುದು. ಮುಖ್ಯವಾಗಿ
ಗಳನ್ನು ಓದಬೇಕು

“ಇನ್ನೂ
ಗಳುಂಟು.”